# ಸಾಯಿಬಾಬಾ
# ದೇವರಾ! ಅಲ್ಲವಾ!




ಗ್ರಂಥಕರ್ತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು



www.thraithashakam.org





# ಸಾಯಿಬಾಬಾ ದೇವರಾ ಅಲ್ಲವಾ?


<u>ರಚಿತ</u>

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ
ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

---

ತೆಲುಗುನಿಂದ ಕನ್ನಡಕ್ಕೆ ಅನುವಾದ

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**


---





<u>ಗ್ರಂಥ ಮುದ್ರಣ</u>

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಅಕ್ಟೋಬರ್–2016

ಪ್ರತಿಗಳು : 1000 **ಬೆಲೆ. 60/–**

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ–ಉತ್ತರಗಳು.
03. ಧರ್ಮ–ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ–ಅಸತ್ಯವಾ?)
06. ದೆವ್ವಗಳಹಾಗೂ–ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ–ಮಹಿಮೆ (ಸತ್ಯವಾ–ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ–ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ–ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ–ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು–963.
38. ಮತ–ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು–ಆಸ್ತಿಕರು.
44. ಹೇತುವಾದ–ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.
54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು-ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ – ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಹಿಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.
79. ಸಾಯಿಬಾಬಾ ದೇವರಾ! ಅಲ್ಲವಾ!
80. ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
81. ದೇವರ ಆಗಮನಕ್ಕೆ ಇದು ಸಮಯವಲ್ಲವೇ!
82. ವಿಶ್ವ ವಿದ್ಯಾಲಯ
83. ಕೃಷ್ಣ ಮೂಸ (ಶ್ರೀ ಕೃಷ್ಣ ಮರಣದ ನಂತರ ಜೀವನ)
84. ಒರೆಗಲ್ಲು (ಗೀಟುರಾಯಿ)
85. ಮೂರು ದೈವ ಗ್ರಂಥಗಳು-ಮೂರು ಪ್ರಥಮ ವಾಕ್ಯಗಳು
86. ಹೇತುವಾದ ಪ್ರಶ್ನೆಗಳು-ಸತ್ಯವಾದ ಉತ್ತರಗಳು
87. ದೈವಗ್ರಂಥಗಳಲ್ಲಿ ಸತ್ಯಾಸತ್ಯ ವಿಚಕ್ಷಣೆ



04

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು–
    ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ದ್ವಿತೀಯುಡು.
39. ಎದಮೀದಮುದ್ರ–
    ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
    ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
    ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
    ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
    ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
    ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ – ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ– ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು– ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು– ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು– ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ ಮಹೇಂದ್ರಜಾಲ, ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು–ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು– ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಮಾಯ ಮರ್ಮಮು–ಆತ್ಮ ಧರ್ಮಮು
115. ಶ್ರೀಕೃಷ್ಣುಡು ಚನಿಪೋಯಾಡಾ? ಚಂಪಬಡ್ಡಾಡಾ?
116. ಅಂತಿಮ ದೈವಗ್ರಂಥಮುಲೋ ಪ್ರಥಮವಾಕ್ಯಮುಲು
117. ಅದುರು–ಬೆದುರು
118. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.

**ಸೂಚನೆ :** ತೆಲುಗಿನಿಂದ ಕನ್ನಡಕ್ಕೆ ಅನುವಾದಿಸಲಾಗದ ಪದಗಳು ಹಾಗೆಯೇ ಮುದ್ರಿಸಲಾಗಿದೆ.

# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P

Cell : **ಲಕ್ಷ್ಮಿನಾರಾಯಣಾಚಾರಿ**–09440556968. **ವೆಂಕಟೇಶ್**–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಹೊಸಪೇಟೆ, ಬಳ್ಳಾರಿ (ಜಿಲ್ಲೆ). K. A
Cell : 9611133635,
9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್,
ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು, ಚಿಕ್ಕಸೂಗುರು (ತಾ),
ರಾಯಚೂರು (ಜಿ), Cell:98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ಬೆಂಗಳೂರು–560085
Cell : 9036892829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಯೋಗೇಶ್**.B
ವಡ್ಡೇಪಾಲ್ಯಂ (ಗ್ರಾ),
ಕುಂದುರ್ಪಿ(ಮಂ),ಅನಂತಪುರ(ಜಿಲ್ಲಾ)
ಸೆಲ್: 9620193341, 9739228639

**ಬಸವರಾಜ ಅಂಗಡಿ**
(ಸಾ) ಪೋತ್ನಾಳ, (ತಾ) ಮಾನವಿ,
ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಜನತಾ ನಗರ, ತೊಣಚಿಕೊಪ್ಪಲ್,
ಮೈಸೂರ್–547097
Cell : 9141109799, 9986369118

**T.V. ರಮಣ**
ಓಉಖ ಲೇಔಟ್, ರೂಪೇನಾ
ಅಗ್ರಹಾರ, ಬೆಂಗಳೂರು–560068.
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್
ಫೀಲ್ಡ್ ರೋಡ್, ಬೆಂಗಳೂರು–066
Cell : 9482516023

**ಯೋಗೇಶ್**
ಸೂಲನಾಯಕನಹಳ್ಳಿ (ಗ್ರಾಮ),
ತುಮಕೂರು (ಜಿಲ್ಲೆ).
ಸೆಲ್:8762523963,9740744424

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

# ಸಾಯಿಬಾಬಾ ದೇವರಾ ಅಲ್ಲವಾ? 09

ಈ ಮಧ್ಯಕಾಲದಲ್ಲಿ ಸುಮಾರು ಹತ್ತು ವರ್ಷಗಳಿಂದ ಎಲ್ಲಿಯೋ ಒಂದು ಕಡೆ 'ಸಾಯಿಬಾಬಾ ದೇವರು ಅಲ್ಲ' ಎಂದು ಕೆಲವರು ಹೇಳುವುದು, ಅದಕ್ಕೆ ಬದಲು 'ದೇವರೆಂದು' ಕೆಲವರು ಹೇಳುವುದು ನಡೆಯುತ್ತಿದೆ. ಈ ವಿವಾದವನ್ನು ಈದಿನ ಸ್ವಾಮಿಗಳು ಸಹಿತ ವಾದಿಸುವುದು ನಡೆಯುತ್ತಿದೆ. ದೈವಜ್ಞಾನವನ್ನು ಹೇಳಬೇಕಾದ ಸ್ವಾಮೀಜಿಗಳೆ ಈ ವಿವಾದದಲ್ಲಿ ಬಹಳ ಆಳದವರೆಗು ಇಳಿದು 'ಅಲ್ಲವೆಂದರೇ ಹೌದೆಂದು, ಹೌದೆಂದರೇ ಅಲ್ಲವೆಂದು' ವಾದಿಸುವುದು ನಡೆಯುತ್ತಿದೆ. ಇದನ್ನು ಗಮನಿಸಿದ ಪ್ರಜೆಗಳಿಗೆ ಇದು ದೊಡ್ಡ ವಿವಾದವಾಗಿ ಕಾಣಿಸುತ್ತಿದೆ. ಹಿಂದೂಮತದಲ್ಲಿ ಕೆಲವರು ಸ್ವಾಮೀಜಿಗಳು ಒಂದು ಗುಂಪಾಗಿ ಏರ್ಪಟ್ಟು ಸಾಯಿಬಾಬಾ ಹಿಂದುವು ಅಲ್ಲ, ಆತನನ್ನು ಗುರು ಎನ್ನುವುದಕ್ಕೆ ಅನರ್ಹನು, ಆತನು ಗುರು ಅಲ್ಲ, ದೇವರು ಅಷ್ಟಕ್ಕೂ ಅಲ್ಲ. ಆದ್ದರಿಂದ ಹಿಂದೂ ದೇವಾಲಯಗಳಲ್ಲಿ ಸಾಯಿಬಾಬಾ ಪ್ರತಿಮೆಯನ್ನು ಇಡಬಾರದು. ಹಿಂದೂ ದೇವಾಲಯಗಳಲ್ಲಿ ಸಾಯಿಬಾಬಾನನ್ನು ದೇವರಂತೆ ಪೂಜಿಸಬಾರದು ಎಂದು ವಾದಿಸುವುದು ನಡೆದಿದೆ.

ಅದಕ್ಕೆ ಬದಲು ಸಾಯಿಬಾಬಾ ಭಕ್ತರು, ಸಾಯಿಬಾಬಾನನ್ನು ಕುರಿತು ದೊಡ್ಡದಾಗಿ ಬೋಧಿಸುವ ಕೆಲವರು ಬೋಧಕರು ಸಾಯಿಬಾಬಾನನ್ನು ದೇವರೆಂದು, ಗುರುವೆಂದು ಹೇಳುತ್ತಿದ್ದಾರೆ. ಬಹಳಜನ ಸ್ವಾಮೀಜಿಗಳೊಂದಿಗೆ ವಾದೋಪವಾದಗಳು ನಡೆಸುತ್ತಿದ್ದಾರೆ. ದೊಡ್ಡ ಜ್ಞಾನಿಗಳಾದ ಸ್ವಾಮೀಜಿಗಳೇ ಹೀಗೆ ತರ್ಜನೆ ಭರ್ಜನೆ ಬೀಳುವುದನ್ನು ನೋಡಿದ ಪ್ರಜೆಗಳು ಯಾವುದು ನಂಬಬೇಕೋ, ಯಾವುದು ನಂಬಬಾರದೋ ಅರ್ಥವಾಗದ ಅಯೋಮಯ ಸ್ಥಿತಿಯಲ್ಲಿದ್ದಾರೆ. ನಡೆಯುತ್ತಿರುವ ಈ ರಾದ್ಧಾಂತವೆಲ್ಲವನ್ನು ನಾವು ಸಹ ಗಮನಿಸುತ್ತಲೇ ಇದ್ದೇವೆ. ನಾವು ನಮ್ಮ ದಾರಿಯನ್ನು ಬಿಟ್ಟು ಇತರರ ದಾರಿಯೊಳಗೆ ಹೋಗುವುದಿಲ್ಲ, ಆದ್ದರಿಂದ ನಾವು ಮೌನವಾಗಿದ್ದೇವೆ. ಆದರೂ ನನ್ನನ್ನು ಪ್ರಶ್ನಿಸುವವರಿದ್ದಾರೆ ಅಲ್ಲವೆ! ಅವರು ಬಂದು ನನ್ನನ್ನು ಪ್ರಶ್ನಿಸುವುದು ನಡೆದಿದೆ. ಆಗ ನನಗೆ ತಿಳಿದಿರುವುದು ನಾನು ಹೇಳಬೇಕಾಗಿ ಬಂದಿದೆ. ಪ್ರಜೆಗಳು ಇನ್ನೂ

ಜ್ಞಾನಿಗಳಾಗಿ ಬದಲಾಗುವುದಕ್ಕೆ ನನ್ನ ಉತ್ತರಗಳು ಕೆಲಸಕ್ಕೆ ಬಂದರೇ ಅದಕ್ಕಿಂತ ನನಗೆ ಬೇಕಾಗಿರುವುದೇನಿದೆ. ಆದ್ದರಿಂದ ನಾನು ನನಗೆ ತಿಳಿದಿರುವುದನ್ನೇ ಹೇಳಿದ್ದೇನೆ.

**ಪ್ರಶ್ನೆ :– ಒಬ್ಬ ವ್ಯಕ್ತಿಯನ್ನು ಕುಲದ ಹೆಸರಿನಿಂದ, ಮತದ ಹೆಸರಿನಿಂದ ವಿಭಜಿಸಿ ಆತನನ್ನು ಗುರು ಅಲ್ಲವೆಂದು, ಇತರ ಮತಸ್ಥನು ಗುರು ಹೇಗಾಗುತ್ತಾನೆ? ಎಂದು ಅನ್ನುವುದು ಸರಿಯಾದ ಮಾತೇನಾ ಎಂದು ನೀವನ್ನುತ್ತೀರಾ?**

**ಉತ್ತರ :–** ಕುಲ, ಮತ ಎನ್ನುವವು ಅಜ್ಞಾನ ಸಂಬಂಧವಾದವುಗಳೇ ಹೊರತು, ಜ್ಞಾನಕ್ಕೆ ಕುಲ, ಮತ ಎನ್ನುವವು ಸಂಬಂಧವಿಲ್ಲ. ಗುರು ಎಂಬುವವನು ಗುಣಾತೀತನು. ಯಾವಾಗ ಗುಣತೀತಾನೋ ಆಗ ಆತನನ್ನು ಮತಾತೀತನೆಂದು, ಕುಲಾತೀತನೆಂದು ಹೇಳಬಹುದು. ಆದ್ದರಿಂದ ಕುಲ, ಮತಗಳ ಸಂಬಂಧದಿಂದ ಒಬ್ಬನನ್ನು ಗುರುವಾ! ಅಲ್ಲವಾ? ಎಂದು ಹೇಳುವುದಕ್ಕೆ ಸಾಧ್ಯವಿಲ್ಲ. ಹೇಳುವ ಜ್ಞಾನವನ್ನನುಸರಿಸಿ ಗುರುವಾ! ಅಲ್ಲವಾ? ಎಂದು ನಿರ್ಣಯ ಮಾಡಬಹುದು. ಒಂದು ವಿಧವಾಗಿ ಹೇಳಿದರೆ ಪ್ರಪಂಚದಲ್ಲಿ ಯಾರೂ ಗುರುವನ್ನು ಗುರುತಿಸಲಾರರು. ಗುರು ಯಾರಿಗೂ ತಿಳಿಯದವನಾಗಿರುತ್ತಾನೆ.

**ಪ್ರಶ್ನೆ :– ಸಾಯಿಬಾಬಾನನ್ನು ಮುಖ್ಯವಾಗಿ ದೇವರು ಅಲ್ಲ, ಆತನನ್ನು ಪೂಜಿಸುವುದು ಸರಿಯಲ್ಲ, ಹಿಂದೂ ದೇವಾಲಯಗಳಲ್ಲಿ ಇರಬಾರದು ಎಂದು ಬಹಳಜನ ಸ್ವಾಮೀಜಿಗಳು ಅನ್ನುತ್ತಿದ್ದಾರೆ. ಇದಕ್ಕೆ ನೀವೇನು ಹೇಳುತ್ತೀರಾ?**

**ಉತ್ತರ :–** ಇದನ್ನೆಲ್ಲವನ್ನು ಗಮನಿಸಿದರೆ ಇದೆಲ್ಲವೂ ವಿವಕ್ಷತೆಯಿಂದ ಮತ್ತು ಅಸೂಯೆಯಿಂದ ಮಾತನಾಡುವ ಮಾತುಗಳೇ ಹೊರತು ಬೇರೆಯಲ್ಲವೆಂದು ತಿಳಿಯುತ್ತಿದೆ. **"ದೇವರು"** ಎಂಬ ವಿಷಯ **"ನಂಬಿಕೆ"** ಎನ್ನುವುದರ ಮೇಲೆ ಆಧಾರಪಟ್ಟಿರುತ್ತದೆ. ಮನುಷ್ಯರು ಎಷ್ಟೋ ಜನ ಅವರವರ ನಂಬಿಕೆಗಳನ್ನನುಸರಿಸಿ ಅವರವರ ದೇವತೆಗಳನ್ನು ಪೂಜಿಸುತ್ತಿದ್ದಾರೆ. ಒಬ್ಬರು ಅವರ ನಂಬಿಕೆಯಿಂದ ಪೂಜಿಸುವ ದೇವರನ್ನು ಇತರರು ಅಲ್ಲಗಳೆಯುವುದು ವಿವಾದವಾಗುತ್ತದೆ.

ಈತನು 'ದೇವರು' ಎಂದು ನಿರ್ಣಯಿಸುವುದಕ್ಕೆ ತಕ್ಕ ಜ್ಞಾನ ಅಗತ್ಯ. ಹಾಗೆಯೇ ಈತನು ದೇವರು ಅಲ್ಲ ಎನ್ನುವುದಕ್ಕೂ ಸಹ ಜ್ಞಾನ ಅಗತ್ಯ. **ಒಂದು ವಿಷಯವನ್ನು ನಿರೂಪಿಸುವುದಕ್ಕೆ ಶಾಸ್ತ್ರವೆಷ್ಟು ಅಗತ್ಯವೋ, ಹಾಗೆಯೇ ಒಂದು ವಿಷಯವನ್ನು ಖಂಡಿಸುವುದಕ್ಕೆ ಸಹ ಶಾಸ್ತ್ರ ಅಷ್ಟೇ ಅಗತ್ಯವಾಗುತ್ತದೆ.** ಮುಖ್ಯವಾಗಿ ಸಾಯಿಬಾಬಾ ವಿಷಯದಲ್ಲಿ ಆತನು ದೇವರಾ! ಅಲ್ಲವಾ? ಎಂಬ ವಿಷಯ ಪಕ್ಕಕ್ಕಿಟ್ಟು ಆತನನ್ನು ಹಿಂದೂ ದೇವಾಲಯಗಳಲ್ಲಿ ಪೂಜಿಸಬಾರದು ಎನ್ನುವುದು ಪ್ರಮುಖವಾಗಿ ಕೆಲವರು ಸ್ವಾಮೀಜಿಗಳ ವಾದನೆ. ಸಾಯಿಬಾಬಾ ಮಂದಿರ ಎಂದು ಹೆಸರಿಟ್ಟು, ಪ್ರತ್ಯೇಕವಾಗಿ ಸಾಯಿಬಾಬಾ ಗುಡಿಯನ್ನು ಕಟ್ಟಿ, ಅದರಲ್ಲಿ ಸಾಯಿಬಾಬಾ ಗೊಂಬೆಯನ್ನಿಟ್ಟು, ಸಾಯಿಬಾಬಾ ಭಕ್ತರು ಪೂಜೆಮಾಡುತ್ತಿದ್ದಾರೆ. ಒಂದುವೇಳೆ ಹಿಂದೂ ದೇವಾಲಯಗಳನ್ನು ಆಕ್ರಮಿಸಿಕೊಂಡು, ಹಿಂದೂ ದೇವಲಾಯಗಳಲ್ಲಿ ಸಾಯಿಬಾಬಾನನ್ನು ಪೂಜಿಸಿದರೆ ಅದನ್ನು ತಪ್ಪೆಂದು, ಹಾಗೆ ಮಾಡಬಾರದೆಂದು ಹೇಳಬಹುದು. ಹಾಗೆ ಹಿಂದೂ ದೇವಾಲಯಗಳಲ್ಲಿ ಸಾಯಿಬಾಬಾನನ್ನು ಎಲ್ಲಿಯೂ ಇಡಲಿಲ್ಲ. ಸಾಯಿಬಾಬಾಗೆ ಪ್ರತ್ಯೇಕವಾಗಿ ಕಟ್ಟಿಸಿದ ಆಲಯದಲ್ಲಿ ಸಾಯಿಬಾಬಾನನ್ನು ಇಡುವುದಾಗಿದೆ. ಅವರ ಗುಡಿಯಲ್ಲಿ ಅವರು ನಂಬಿದ ದೇವರನ್ನು ಅವರು ಇಟ್ಟುಕೊಂಡಿದ್ದಾರೆ ಆದರೆ, ನಿಮ್ಮ ಗುಡಿಯೊಳಗೆ ಅವರು ಬರಲಿಲ್ಲ ಅಲ್ಲವೆ! ಈದಿನ ಸಾಯಿಬಾಬಾ ಗುಡಿಗಳೆಲ್ಲ ಪ್ರತ್ಯೇಕಿಸಿ ಸಾಯಿಭಕ್ತರು ಕಟ್ಟಿಕೊಂಡಿರುವವೇ ಆಗಿವೆ. ಸಾಯಿಬಾಬಾ ಇತರ ಮತದವನಾದಾಗ ಆತನ ಗುಡಿಗಳು ಇತರ ಮತದವರು ಕಟ್ಟಲಿಲ್ಲ ಅಲ್ಲವೆ! ಸಾಯಿಬಾಬಾ ಗುಡಿಗಳನ್ನು ಕಟ್ಟಿದವರೆಲ್ಲರೂ ಹಿಂದೂಗಳೇ. ಹಿಂದೂಗಳು ಸಾಯಿಬಾಬಾ ಗುಡಿ ಕಟ್ಟಿದಾಗ ಅವರನ್ನು ಸಾಯಿಭಕ್ತರನ್ನಾಗಿ ಹೇಳಬಹುದು. ಸಾಯಿಬಾಬಾ ಭಕ್ತರು ಹಿಂದೂಗಳಾಗಿಯೇ ಇದ್ದಾರಲ್ಲವೆ! ಅವರು ಮುಸ್ಲಿಮ್‌ರಾಗಿ ಬದಲಾಗಲಿಲ್ಲ ಅಲ್ಲವೆ! ಹಾಗಿರುವಾಗ ಸಾಯಿಭಕ್ತರನ್ನು ಸರಿಯಾದ ಹಿಂದೂಗಳು ಅಲ್ಲಗಳೆಯುವುದು, ನಮ್ಮ ಮುಖದ ಮೇಲೆ ನಾವೇ ಮಸಿ ಬಳೆದುಕೊಂಡಂತಾ ಗುತ್ತದೆ. ಸಾಯಿಬಾಬಾನನ್ನು ಮುಸ್ಲಿಮ್ ಎಂದು ಹೇಳಿದಾಗ ಸಾಯಿಗುಡಿ ಮುಸ್ಲಿಮ್‌ರಿಗೆ ಸಂಬಂಧಿಸಿರುವುದಾಗುತ್ತದೆ ಅಲ್ಲವೆ! ಸಾಯಿಬಾಬಾ ಗುಡಿಯನ್ನು

ಹಿಂದೂಗಳ ಗುಡಿ ಎನ್ನುವುದರಲ್ಲಿ ಅರ್ಥವೇ ಇಲ್ಲ. ಕೆಲಸ ಕಾರ್ಯ ಇಲ್ಲದವರು ಅರ್ಥಸರ್ಥವಿಲ್ಲದ ಆರೋಪಣೆಗಳು ಮಾಡುವುದು ಹೊರತು ಮತ್ತೊಂದು ಅಲ್ಲವೆಂದು ತಿಳಿಯುತ್ತಿದೆ.

**ಪ್ರಶ್ನೆ :– ಯಾವಾಗ ಎಲ್ಲಿಯೂ ಹೊರಗೆ ತಿಳಿಯದ ಒಬ್ಬ ಸ್ವಾಮೀಜಿ ಟಿ.ವಿ ತೆರೆಮೇಲೆ ಬಂದು ಸಾಯಿಬಾಬಾ ದೇವರು ಅಲ್ಲವೆಂದು, ಹಿಂದೂ ದೇವಾಲಯಗ ಳಲ್ಲಿ ಇರಬಾರದೆಂದು ಹೇಳುವುದು ನಡೆದಿದೆ. ಆ ಸ್ವಾಮೀಜಿ ಪ್ರತ್ಯೇಕವಾದ ಪೀಠಾಧಿಪತಿಯಾಗಿ ಹೇಳಿಕೊಳ್ಳುವುದು ನಡೆದಿದೆ. ಸಾಯಿಬಾಬಾನನ್ನು ದೇವರಲ್ಲ ಎಂದಿರುವುದು, ಹಿಂದೂ ದೇವಾಲಯಗಳಲ್ಲಿ ಪೂಜಿಸಬಾರದೆಂಬುದು, ಎಲ್ಲಾ ಹಿಂದೂ ಮತಕ್ಕೆ ಸಂಬಂಧಿಸಿದ ಪೀಠಾಧಿಪತಿಗಳೇ ಆಗಿರುವುದರಿಂದ ಈ ವಿಷಯಕ್ಕೆ ಮುಖ್ಯವಾದ ಗುರುತು ಬಂದಿದೆ. ಒಬ್ಬ ಹಿಂದೂ ಸ್ವಾಮೀಜಿಯಾಗಿ ನೀವೇನು ಹೇಳುತ್ತೀರಾ?**

**ಉತ್ತರ :–** ಕ್ಷಮಿಸಿರಿ! ನಾನು ಸ್ವಾಮೀಜಿಯಲ್ಲ, ಪೀಠಾಧಿಪತಿ ಅಷ್ಟಕ್ಕೂ ಅಲ್ಲ. ನಾನು ಒಬ್ಬ ಯೋಗಿ ಮತ್ತು ಹಿಂದೂಮತದಲ್ಲಿರುವ ಅದ್ವೈತ, ದ್ವೈತ, ವಿಶಿಷ್ಟಾದ್ವೈತ ಸಿದ್ಧಾಂತಗಳ ಕರ್ತರಂತೆ ನಾನು ತ್ರೈತ ಸಿದ್ಧಾಂತಕರ್ತನು. ನೀವು ಕೇಳಿದ್ದೀರಾ ಆದ್ದರಿಂದ ನಾನು ಇರುವುದಿದ್ದಂತೆ ಹೇಳಬೇಕೆಂದುಕೊಂಡಿದ್ದೇನೆ. ದೇಶದಲ್ಲಿ ಯಾವ ಸ್ವಾಮೀಜಿಯಾಗಲಿ, ಪೀಠಾಧಿಪತಿಯಾಗಲಿ, ಆಧ್ಯಾತ್ಮಿಕ ತಜ್ಞರಾಗಲಿ, ಅದ್ವೈತ ಸಿದ್ಧಾಂತವನ್ನೋ, ವಿಶಿಷ್ಟಾದ್ವೈತ ಸಿದ್ಧಾಂತವನ್ನೋ, ದ್ವೈತ ಸಿದ್ಧಾಂತವನ್ನೋ ಆಚರಿಸುವವರಾಗಿರುತ್ತಾರೆ. ಈ ಮಧ್ಯಕಾಲದಲ್ಲಿ ಕಳೆದ 38 ವರ್ಷಗಳಿಂದ **ನಮ್ಮ ಮೂಲಕ ತ್ರೈತ ಸಿದ್ಧಾಂತ ಪ್ರಚಾರವಾಗಿದೆ.** ನಮ್ಮ ಸಿದ್ಧಾಂತವನ್ನು ಅನುಸರಿಸುವವರು ಕೇವಲ ದೈವಜ್ಞಾನವನ್ನು ಬೋಧಿಸುವವ ರಾಗಿಯೇ ಇರುತ್ತಾರೆ ಹೊರತು, ಇಂತಹ ಅನಗತ್ಯ ರಾದ್ಧಾಂತದೊಳಗೆ ಹೋಗುವುದಿಲ್ಲ. ಈ ವಿಷಯದಲ್ಲಿ ಹೆಚ್ಚಾಗಿ ಮಾತನಾಡುವವರೆಲ್ಲರೂ ಅದ್ವೈತ ಸಿದ್ಧಾಂತವನ್ನು ಅನುಸರಿಸುವವರೇ ಇರುತ್ತಾರೆ. ಅದರಲ್ಲಿಯೂ ಎಲ್ಲರೂ ಅಜ್ಞಾನಕ್ಕೆ ಸೇರಿದವರೇ ಕಾಣಿಸುತ್ತಿದ್ದಾರೆ. ನಾವು ಹೊರತು ಯಾರೂ ಸ್ವಾಮಿಗಳಾಗಿ

ಚಲಾವಣೆ ಆಗಬಾರದೆನ್ನುವವರೇ ಹಾಗೆ ಮಾತನಾಡುತ್ತಿದ್ದಾರೆ. ಎಲ್ಲಿಯೂ ಹೊರಗೆ ತಿಳಿಯದವರು ತಾವು ಹೊರಗೆ ಪ್ರಚಾರ ಆಗಬೇಕೆಂಬ ಉದ್ದೇಶದಿಂದ ಮಾಡಿದ ಆರೋಪಣೆಗಳೇಯೆಂದು ತಿಳಿಯುತ್ತಿದೆ. ಅಂತವರು ಮಾತನಾಡುವ ವಾದನೆಗಳು ಸ್ವಲ್ಪವಾದರೂ ಸಾರಾಂಶ ಇಲ್ಲದ ವಾದನೆಗಳಾಗಿರುತ್ತವೆ.

ಸಾಯಿಬಾಬಾನನ್ನು ಒಬ್ಬನು ದೇವರು ಅಲ್ಲ ಎಂದರೇ ನೂರುಜನ ದೇವರೆಂದು ಪ್ರಜೆಗಳಲ್ಲಿ ಪ್ರತಿಸ್ಪಂದನ ಬರುತ್ತಿದೆ. ಸಾಯಿಬಾಬಾನನ್ನು ದೇವರೆಂದು ನಂಬಿದವರಲ್ಲಿ ಹೆಚ್ಚು ಜನರು ಹಿಂದೂಗಳೇ ಇದ್ದಾರೆ. ಇಲ್ಲಿಯವರೆಗು ಹಿಂದೂ ಮತವನ್ನು ಅಡ್ಡ ಇಟ್ಟುಕೊಂಡು ಸಾಯಿಬಾಬಾ ಹಿಂದೂ ಅಲ್ಲವೆಂದು, ಹಿಂದೂ ದೇವಾಲಯಗಳಲ್ಲಿ ಇರಬಾರದೆಂದು ಎಷ್ಟುಜನ ಸ್ವಾಮೀಜಿಗಳು ಹೇಳಿದರೂ, ಅವರ ಮಾತನ್ನು ಹಿಂದೂಗಳಾದ ಸಾಯಿಭಕ್ತರು ಯಾವುದು ಲೆಕ್ಕಮಾಡುತ್ತಿಲ್ಲ. ನಮ್ಮನ್ನು ಹಿಂದೂಗಳಲ್ಲ ಎಂದರೂ ಫರವಾಗಿಲ್ಲ, ನಮ್ಮನ್ನು ಹಿಂದೂಗಳಿಂದ ಹೊರಹಾಕಿದರೂ ಫರವಾಗಿಲ್ಲ, ನಾವು ಸಾಯಿಬಾಬಾ ಭಕ್ತರಾಗಿಯೇ ಇರುತ್ತೇವೆಂದು ಆತನ ಭಕ್ತರಾಗಿರುವ ಹಿಂದೂಗಳೆಲ್ಲರೂ ಏಕ ಕಂಠದಿಂದ ಹೇಳುತ್ತಿದ್ದಾರೆ.

**ಪ್ರಶ್ನೆ :– ಸಾಯಿಬಾಬಾ ಎಂದರೇ ಸುಮಾರು ಎರಡುನೂರು ವರ್ಷಗಳಿಂದ ಹೆಸರುವಾಸಿಯಾದ ಶಿರಿಡಿ ಸಾಯಿಬಾಬಾ ವಿಷಯದಲ್ಲಿಯೇ ಈ ರಾದ್ಧಾಂತ ತೆರೆ ಮೇಲಕ್ಕೆ ಬಂದಿದೆ. ಪುಟ್ಟಪರ್ತಿ ಸಾಯಿಬಾಬಾ ವಿಷಯದಲ್ಲಿ ಯಾವ ತಗಾದೆ ಬರಲಿಲ್ಲ ಅಲ್ಲವೆ!**

**ಉತ್ತರ :–** ಶಿರಿಡಿ ಸಾಯಿ ಬಾಬಾನನ್ನು ಗುಡಿಕಟ್ಟಿ ಪೂಜಿಸುವವರಿದ್ದಾರೆ. ಆದ್ದರಿಂದ ಈ ತಗಾದೆಗಳೆಲ್ಲ ಆತನ ವಿಷಯದಲ್ಲಿಯೇ ಬಂದಿವೆ. ಪುಟ್ಟಪರ್ತಿ ಸಾಯಿಬಾಬಾರವರು ಈ ಮಧ್ಯದಲ್ಲಿಯೇ ಸುಮಾರು ನಾಲ್ಕು ವರ್ಷಗಳ ಕೆಳಗೆ ಮರಣಿಸಿದ್ದಾರೆ. ಇಲ್ಲಿಯವರೆಗು ಆತನು ಸಜೀವವಾಗಿರುವುದರಿಂದ ಪುಟ್ಟಪರ್ತಿ ಸಾಯಿಬಾಬಾ ಅವರಿಗೆ ಯಾರೂ ಗುಡಿಕಟ್ಟಿ ಪೂಜಿಸಲಿಲ್ಲ. ನಂತರ ಕಾಲದಲ್ಲಿ ಏನು ನಡೆಯುತ್ತದೋ ಏನೋ ನಮಗೆ ತಿಳಿದಿಲ್ಲ. ಶಿರಿಡಿ ಸಾಯಿಬಾಬಾ

ವಿಷಯಕ್ಕೆ ಬಂದರೇ ದಕ್ಷಿಣ ಭಾರತದೇಶದಲ್ಲಿ ಹೆಚ್ಚು ಜನರು, ಉತ್ತರ ಭಾರತದೇಶದಲ್ಲಿ ಕಡಿಮೆ ಜನ ಈತನ ಭಕ್ತರು ಇದ್ದಾರೆ.

**ಪ್ರಶ್ನೆ :– ಮೂರು ಮತದವರಲ್ಲಿ ಒಂದು ಹಿಂದೂಮತದವರೇ ಬಹಳ ಹೆಚ್ಚು ಭಕ್ತರಿರುವುದು, ಉಳಿದ ಮತದವರು ಯಾರೂ ಆತನ ಭಕ್ತರಾಗಿಲ್ಲದಂತೆ ಹೋಗುವುದಕ್ಕೆ ಕಾರಣವೇನು ಇದೆ?**

**ಉತ್ತರ :–** ಹಿಂದೂಮತದಲ್ಲಿ ಹೊರತುಪಡಿಸಿ ಉಳಿದ ಮತಗಳಲ್ಲಿ ದೇವರನ್ನು ಬಿಟ್ಟು ಇತರರನ್ನು ಮುಗಿಯಬಾರದೆಂಬ ನಿಯಮವಿದೆ. ಆದ್ದರಿಂದ ಅವರು ಅವರವರ ದೇವರನ್ನು ಮಾತ್ರವೇ ಆರಾಧಿಸುತ್ತಿದ್ದಾರೆ. ಇತರರನ್ನು ಯಾರನ್ನು ಆರಾಧಿಸುತ್ತಿಲ್ಲ. ಶಿರಿಡಿ ಸಾಯಿ ವಾಸ್ತವವಾಗಿ ಮುಸ್ಲಿಮ್ ಮತದವನು. ಹಿಂದೂ ಮತದಲ್ಲಿ ಸನ್ಯಾಸಿಗಳಿರುವಂತೆ ಮುಸ್ಲಿಮ್ ಮತದಲ್ಲಿ 'ಪಕ್ಕೀರ್' ಎನ್ನುವವರನ್ನು ಸನ್ಯಾಸಿಗಳಾಗಿ ಹೇಳುತ್ತಿದ್ದರು. ಶಿರಿಡಿ ಸಾಯಿ ಪಕ್ಕೀರ್ ಆಗಿರುವುದರಿಂದ ಆತನನ್ನು ಮುಸ್ಲಿಮ್ ಮತದಲ್ಲಿ ಸನ್ಯಾಸಿಯಾಗಿ ಹೇಳಲ್ಪಡುತ್ತಿದ್ದಾನೆ.

**ಪ್ರಶ್ನೆ :– ಹಿಂದೂಗಳಲ್ಲಿ ಸನ್ಯಾಸಿಗಳಿರುವುದನ್ನು ನೋಡಿದ್ದೇವೆ. ಹಿಂದೂಗಳಲ್ಲಿ ಸನ್ಯಾಸಿ ಆದವನು ಕಾಷಾಯಬಣ್ಣದ ಬಟ್ಟೆಯನ್ನು ಧರಿಸಿರುವುದು ನೋಡಿದ್ದೇವೆ, ಮುಸ್ಲಿಮ್‌ರಲ್ಲಿ ಸನ್ಯಾಸಿಗಳು ಸಾಧಾರಣ ಮುಸ್ಲಿಮ್‌ಗಳಂತೆ ಇದ್ದಾರೆ ಹೊರತು, ಅವರಲ್ಲಿ ಸನ್ಯಾಸಿ ಎನ್ನುವುದಕ್ಕೆ ಯಾವ ವಿಧವಾದ ಗುರುತು ಇಲ್ಲ. ಅಂತಹದರಲ್ಲಿ ಅವರಲ್ಲಿ ಸನ್ಯಾಸಿಗಳು ಯಾರು ಎಂದು ಗುರುತಿಸುವುದು ಕಷ್ಟವಾಗುತ್ತದೆ ಅಲ್ಲವೆ!**

**ಉತ್ತರ :–** ಪಕೀರರು ಎಂದರೇ ಸನ್ಯಾಸಿಗಳಿರುವಂತೆ ಹೊರತು, ಅವರು ನಿಜವಾಗಲು ಸನ್ಯಾಸಿಗಳು ಅಲ್ಲವೆಂದೇ ಹೇಳಬೇಕು. ಒಂದು ಮತದಲ್ಲಿ ಒಂದು ಕುಲದಂತವರು ಪಕೀರ್‌ಗಳು. ಮುಸ್ಲಿಮ್‌ರಲ್ಲಿ ಪ್ರತ್ಯೇಕವಾದ ಗುಂಪನ್ನು ಪಕೀರ್‌ಗಳು ಎಂದು ಅನ್ನುತ್ತಿದ್ದಾರೆ ಹೊರತು ಅವರು ಪ್ರತ್ಯೇಕಿಸಿ ಸನ್ಯಾಸತ್ವವನ್ನು ಸ್ವೀಕರಿಸಿದವರು ಅಲ್ಲ. ಒಬ್ಬ ಪಕೀರ್‌ಗೆ ಹುಟ್ಟಿದವರೆಲ್ಲರನ್ನು, ಅವರ ಕುಟುಂಬ ದವರೆಲ್ಲರನ್ನು ಪಕೀರ್‌ಗಳೆಂದೇ ಕರೆಯುತ್ತಿದ್ದಾರೆ. ಆದ್ದರಿಂದ ಅವರು ಆ ಮತದಲ್ಲಿ ಒಂದು ಗುಂಪಿನವರೆಂದು ಹೇಳಬಹುದು.

**ಪ್ರಶ್ನೆ :– ಸಾಯಿಬಾಬಾನನ್ನು ಕುರಿತು ಸ್ವಾಮೀಜಿಗಳು ಏಕೆ ವಿವಾದಾಸ್ಪದವಾಗಿ ಮಾತನಾಡುತ್ತಿದ್ದಾರೆ?**

**ಉತ್ತರ :–** ಚೆನ್ನಾಗಿ ಆಲೋಚಿಸಿದರೆ, ಆಧ್ಯಾತ್ಮಿಕವಾಗಿ ಪ್ರಜೆಗಳು ಯಾವುದೋ ಒಂದು ಭಕ್ತಿಯಲ್ಲಿರುವುದು ಒಳ್ಳೆಯದು. 'ಕುರುಡನಿಗಿಂತ ಮೆಳ್ಳಗಣ್ಣಿನವನು ಮೇಲೆನ್ನುವಂತೆ' ಮೊದಲು ಯಾವ ಭಕ್ತಿ ಇಲ್ಲದಂತೆ ಇರುವುದಕ್ಕಿಂತ ಯಾವುದೋ ಒಂದು ಭಕ್ತಿ ಇರುವುದು ಒಳ್ಳೆಯದು. ಪ್ರಜೆಗಳು ಸಾಯಿಬಾಬಾನನ್ನು ಕೈ ಮುಗಿಯುವುದು ಕುರುಡನಿಗಿಂತ ಮೆಳ್ಳಗಣ್ಣಿನವನು ಮೇಲೆನ್ನುವಂತೆ ಹೇಳಬಹುದು. ದೇಶದಲ್ಲಿ ಹೆಚ್ಚು ಜನರು ಸಾಯಿಭಕ್ತರಿರುವುದು ನೋಡಿ ಸಹಿಸಲಾರದವರು ತಮಗೆ ಬರಬೇಕಾದ ಗೌರವ, ಆದಾಯ ಎಲ್ಲಾ ಸಾಯಿಬಾಬಾ ಹೈಜಾಕ್ ಮಾಡುತ್ತಿದ್ದಾನೆಂದು ಭಾವಿಸಿದ ಸ್ವಾಮೀಜಿಗಳೆಲ್ಲರೂ ಪ್ರಜೆಗಳನ್ನು ಸಾಯಿಭಕ್ತಿಯಿಂದ ಬದಲಾಯಿಸಬೇಕೆಂದು, ತಮ್ಮಕಡೆ ತಿರುಗಿಸಿಕೊಳ್ಳಬೇಕೆಂದು ತಿಳಿದು ಸಾಯಿಬಾಬಾ ದೇವರು ಅಲ್ಲ, ಹಿಂದೂ ದೇವಾಲಯಗಳಿಂದ ತೆಗೆದುಹಾಕಬೇಕೆಂದು ಹೇಳುತ್ತಿದ್ದಾರೆ. ಸ್ವಾಮಿಗಳೆಲ್ಲರೂ ಸೇರಿ ಎಷ್ಟು ಪ್ರಯತ್ನಿಸಿದರೂ ಪ್ರಜೆಗಳು ಸಾಯಿಬಾಬಾನನ್ನು ಬಿಟ್ಟು ಸ್ವಾಮೀಗಳ ಕಡೆ ಬರಲಿಲ್ಲ.

**ಪ್ರಶ್ನೆ :– ಯಾವ ಗುಡಿಯಿಂದಾದರೂ ಸಾಯಿಬಾಬಾ ವಿಗ್ರಹವನ್ನು ತೆಗೆದುಹಾಕಿದ್ದಾರಾ?**

**ಉತ್ತರ :–** ಸಾಯಿಬಾಬಾ ಇರುವ ಗುಡಿಗಳೆಲ್ಲ ಸ್ವತಃವಾಗಿ ಸಾಯಿಬಾಬಾ ಹೆಸರಿನ ಮೇಲೆ ಕಟ್ಟಲ್ಪಟ್ಟಿರುವವೇ ಹೊರತು, ಪ್ರತ್ಯೇಕಿಸಿ ಅವು ಹಿಂದೂ ಗುಡಿಗಳಲ್ಲ. ಇಲ್ಲಿಯುವರೆಗು ಹಿಂದೂ ಗುಡಿ ಎಂದು ಹೆಸರಿಟ್ಟಿರುವ ಅದರಲ್ಲಿ ಸಾಯಿಬಾಬಾನನ್ನು ಇಡಲಿಲ್ಲ. ಸಾಯಿಬಾಬಾ ಗುಡಿಯಲ್ಲಿ ಸಾಯಿಬಾಬಾನೇ ಮೂಲ ವಿರಾಟ್‌ನಾಗಿ ಇದ್ದಾನೆ. ಅಂತಹದರಲ್ಲಿ ಆ ಗುಡಿಯನ್ನು ಸಾಯಿಬಾಬಾ ಗುಡಿಯೆಂದೇ ಹೇಳುತ್ತಾರೆ ಹೊರತು ಹಿಂದೂ ದೇವರುಗಳ ಹೆಸರಿರುವ ಗುಡಿಯೆಂದು ಯಾರೂ ಹೇಳಲಿಲ್ಲ ಅಲ್ಲವೆ! ಆದುದರಿಂದ ಇಲ್ಲಿಯವರೆಗು ಯಾವ ಗುಡಿಯಿಂದ ಸಾಯಿಬಾಬಾನನ್ನು ತೆಗೆದುಹಾಕಬೇಕೆಂಬ ಕೆಲಸ

ನಡೆಯಲಿಲ್ಲ. ಸಾಯಿಗುಡಿಯಲ್ಲಿ ಸಾಯಿಭಕ್ತರೇ ಇರುವುದರಿಂದ, ಆ ಗುಡಿಯ ಧರ್ಮಕರ್ತನಿಂದ ಹಿಡಿದು ಆಲಯ ಕಮಿಟಿ ಸದಸ್ಯರೆಲ್ಲರೂ ಸಾಯಿಬಾಬಾ ಭಕ್ತರೇ ಇರುವುದರಿಂದ, ಇಲ್ಲಿಯವರೆಗು ಗುಡಿಯಿಂದ ಸಾಯಿಯನ್ನು ತೊಲಗಿಸುವುದು ನಡೆಯಲಿಲ್ಲ.

**ಪ್ರಶ್ನೆ :- ಒಬ್ಬ ಸ್ವಾಮೀಜಿ ಸಾಯಿಬಾಬಾ ದೇವರಲ್ಲ ಎಂದರೇ ಉಳಿದ ಸ್ವಾಮೀಜಿಗಳೆಲ್ಲರೂ ಆ ಮಾತಿಗೆ ಬೆಂಬಲ ಕೊಟ್ಟಿದ್ದಾರೆ. ಸ್ವಾಮಿಗಳು ಒಬ್ಬರಿಗೊಬ್ಬರು ಸಾಯಿಬಾಬಾ ದೇವರಲ್ಲ, ಗುರುವಲ್ಲ ಎಂದು ಒಗ್ಗಟ್ಟಾಗಿ ಹೇಳುತ್ತಿದ್ದರೂ ಸ್ವಾಮೀಜಿಗಳು ಒಂದಾದಂತೆ ಹಿಂದೂಗಳೆನ್ನುವವರು ಎಲ್ಲರೂ ಒಂದಾಗಲಾರರು. ಸ್ವಾಮಿಗಳ ಮಾತುಗಳನ್ನು ಸಮರ್ಥಿಸಲೂ ಇಲ್ಲ, ಮೇಲಾಗಿ ಸ್ವಾಮಿಗಳಿಗೆ ಎದುರು ತಿರುಗಿ ಮಾತನಾಡುವುದು ಸಹ ನಡೆದಿದೆ. ಏಕೆ ಹಾಗೆ ನಡೆದಿದೆ?**

**ಉತ್ತರ :-** ಮನುಷ್ಯರು ತಮ್ಮ ಸುಖಗಳಿಗೋಸ್ಕರ, ಲಾಭಗಳಿಗೋಸ್ಕರ ತಮ್ಮ ಪದವಿಗಳಿಗಾಗಿ, ತಮ್ಮ ಗೌರವ ಮರ್ಯಾದೆಗಳಿಗಾಗಿ ದೇವತೆಗಳನ್ನು ಆರಾಧಿಸುತ್ತಾರೆ. ಭೂಮಿ ಮೇಲೆ ಎಷ್ಟೋ ಜನ ದೇವತೆಗಳನ್ನು ಹಿಂದೂಗಳು ಆರಾಧಿಸುವುದು ನಡೆಯುತ್ತಿದೆ. ಯಾವ ದೇವತೆಯಿಂದ ತಮ್ಮ ಕೋರಿಕೆಗಳು ನೆರವೇರುತ್ತಿವೆಯೋ ಅದೇ ದೇವತೆಯನ್ನೇ ಹೆಚ್ಚಾಗಿ ಪೂಜಿಸುವುದು, ದೊಡ್ಡದಾಗಿ ಹೇಳಿಕೊಳ್ಳುವುದು ನಡೆಯುತ್ತಿದೆ. ಪ್ರಸ್ತುತ ಕಾಲದಲ್ಲಿ ಹಿಂದೂಗಳ ಗುಡಿಗಳಲ್ಲಿ ತಿರುಪತಿ ವೆಂಕಟೇಶ್ವರ ಸ್ವಾಮಿಯನ್ನು ಪ್ರಜೆಗಳು ಸಂಕಟಹರನೆಂದು, ಕೋರಿದ ಕೋರಿಕೆಗಳನ್ನು ನೆರವೇರಿಸುವವನೆಂದು ದೊಡ್ಡದಾಗಿ ಹೇಳಿಕೊಳ್ಳುತ್ತಿದ್ದರು. ಹೇಳಿಕೊಳ್ಳುವುದಲ್ಲದೆ ಆರಾಧಿಸುವುದು ಸಹ ದೊಡ್ಡದಾಗಿಯೇ ಇದೆ. ಇರುವ ದೇವತೆಗಳಲ್ಲಿ ವೆಂಕಟೇಶ್ವರ ಸ್ವಾಮಿಯೇ ದೊಡ್ಡವನೆಂದು ಪ್ರಜೆಗಳು ಹೇಳುತ್ತಿರುವುದನ್ನು ಕೇಳುತ್ತಿದ್ದೇವೆ. ಅದೇ ವಿಧವಾಗಿ ಹಿಂದೂವಲ್ಲದ ಸಾಯಿಬಾಬಾನನ್ನು ಆರಾಧಿಸುವವರು ಸಹ ಸಾಯಿಬಾಬಾ ತಮ್ಮ ಕೋರಿಕೆಗಳನ್ನೆಲ್ಲಾ ನೆರವೇರಿಸಿದ್ದಾನೆಂದು ಬಾಬಾಗಳಲ್ಲಿ ಸಾಯಿಬಾಬಾನೇ ದೊಡ್ಡ ಮಹಿಮೆ ಇರುವವ ನೆಂದು ಹೇಳುತ್ತಿರುವರು. ದೇವತೆಗಳಲ್ಲಿ ವೆಂಕಟೇಶ್ವರನು ದೊಡ್ಡ ವನಾಗಿರುವಾಗ,

ಮನುಷ್ಯನಾಗಿ ಬದುಕು ಮರಣಿಸಿದ ಬಾಬಾಗಳಲ್ಲಿ ಸಾಯಿಬಾಬಾನೇ ದೊಡ್ಡವನೆಂದು ಹೇಳುವುದು ನಡೆಯುತ್ತಿದೆ. ವೆಂಕಟೇಶ್ವರನು ಮನುಷ್ಯನಲ್ಲದಿದ್ದರೂ ಪುರಾಣ ದೇವರು, ಪುರಾತನವಾದ ದೇವರು. ಸಾಯಿಬಾಬಾ ಪುರಾಣ ದೇವರಲ್ಲ ಚರಿತ್ರೆ ಇರುವ ಮನುಷ್ಯ. ಇಲ್ಲಿಗೆ ಸುಮಾರು 180 ವರ್ಷಗಳ ಕೆಳಗೆ ಬದುಕಿ ಆ ಶರೀರವನ್ನು ಬಿಟ್ಟು ಮರಣಿಸಿದ ವ್ಯಕ್ತಿಯೆಂದು ಹೇಳಬಹುದು.

**ಪ್ರಶ್ನೆ :– ಪುರಾಣ ದೇವರು, ಚರಿತ್ರೆ ದೇವರು ಎಂದು ಎರಡು ವಿಧಗಳ ದೇವರುಗಳಿದ್ದಾರೆ?**

**ಉತ್ತರ :–** ಹೌದು ಇದ್ದಾರೆ. ರಾಮನು, ಕೃಷ್ಣನು, ಸಾಯಿಬಾಬಾ ಮೊದಲಾದವರು ಮನುಷ್ಯನಂತೆ ಬದುಕಿದ ಚರಿತ್ರೆ ಇರುವ ದೇವರುಗಳು. ವಿಷ್ಣು, ಈಶ್ವರ, ಬ್ರಹ್ಮ, ಪಾಂಡುರಂಗನು, ವಿನಾಯಕನು ಮನುಷ್ಯರಂತೆ ಬದುಕಿದವರು ಅಲ್ಲ. ಪುರಾಣಗಳಲ್ಲಿ ಸೃಷ್ಠಿಸಲ್ಪಟ್ಟವರು, ಚರಿತ್ರೆ ಇಲ್ಲದವರೆಂದು ಇವರನ್ನು ಹೇಳ ಬಹುದು. ಇದನ್ನನುಸರಿಸಿ ಪ್ರಜೆಗಳು ಪೂಜಿಸುವವರಲ್ಲಿ ಪುರಾಣ ದೇವರುಗಳು, ಚರಿತ್ರೆ ದೇವರುಗಳೆಂದು ಎರಡು ವಿಧಗಳು ಇದ್ದಾರೆ. ಚರಿತ್ರೆ ದೇವರುಗಳಲ್ಲಿ ಒಂದು ಸಮಯದಲ್ಲಿ ರಾಮನು ದೊಡ್ಡದಾಗಿದ್ದನು. ಈದಿನ ಸಾಯಿಬಾಬಾ ದೊಡ್ಡವನಾಗಿ ತಯಾರಾಗಿದ್ದಾನೆ. ಅದಕ್ಕೆ ಕಾರಣ ಆತನು ಪ್ರಜೆಗಳಿಗೆ ಮಾಡಿದ ಮಹತ್ವಗಳು, ತೋರಿಸಿದ ಆದರಣೆಗಳೆಂದು ಹೇಳಬಹುದು. ಹಣ ಉಚಿತವಾಗಿ ಕೊಟ್ಟರೆ ಯಾವ ಮತದವನನ್ನಾದರೂ ದಾತನೆಂದು ತಪ್ಪದೆ ಹೊಗಳುತ್ತೇವೆ. ಹಾಗೆಯೇ ಆಪತ್ತಿನಲ್ಲಿ ಸಹಾಯ ಮಾಡಿದ ಬಾಬಾನನ್ನು ದೇವರೆಂದು ಪ್ರಜೆಗಳು ಅನ್ನುತ್ತಿದ್ದಾರೆ. ದೇವರೆಂಬ ವಿಷಯದಲ್ಲಿ ಯಾರ ಅಭಿಪ್ರಾಯ ಅವರದು, ಯಾರನ್ನು ಅಲ್ಲಗಳೆಯಲಾರೆವು.

**ಪ್ರಶ್ನೆ :– ಯಾರ ನಂಬಿಕೆಯಿಂದ ಅವರು ದೇವರು ಎಂದು ಹೇಳಿದರೆ ಹಾಗೆ ಅನಿಸಿಕೊಂಡವರೆಲ್ಲರೂ ನಿಜವಾಗಲೂ ದೇವರುಗಳಾಗುತ್ತಾರಾ? ದೇವರೆಂಬುದಕ್ಕೆ ಒಂದು ನಿರ್ಧಿಷ್ಟತೆಯಾಗಲಿ, ಶಾಸ್ತ್ರಬದ್ಧತೆಯಾಗಲಿ ಇಲ್ಲವೆನ್ನುತ್ತೀರಾ?**

**ಉತ್ತರ :–** ಸೂತ್ರದ ಪ್ರಕಾರ **'ಒಂದು ವಿಷಯವನ್ನು ಸಮರ್ಥಿಸುವುದಕ್ಕೆ ಎಷ್ಟು ಶಾಸ್ತ್ರಬದ್ಧತೆ ಅಗತ್ಯವೋ, ಹಾಗೆ ಆ ವಿಷಯವನ್ನು ವಿಮರ್ಶಿಸುವುದಕ್ಕೂ ಸಹ ಅಷ್ಟೇ ಶಾಸ್ತ್ರಬದ್ಧತೆ ಅಗತ್ಯ,** ಎಂದು ಹಿರಿಯರು ಹೇಳಿದ್ದಾರೆ. ಆದುದರಿಂದ ಒಬ್ಬರನ್ನು ದೇವರು ಎನ್ನುವುದಕ್ಕಾಗಲಿ, ದೇವರಲ್ಲ ಎನ್ನುವುದಕ್ಕಾಗಲಿ ಎಷ್ಟೋ ಶಾಸ್ತ್ರಬದ್ಧವಾದ, ಧರ್ಮಯುಕ್ತವಾದ ಆಧಾರಗಳಿರಬೇಕು.

**ಪ್ರಶ್ನೆ :– ಶಿರಿಡಿ ಸಾಯಿಬಾಬಾನನ್ನು ನೀವು ದೇವರೆಂದು ಹೇಳುತ್ತೀರಾ? ಅಲ್ಲವೆಂದು ಹೇಳುತ್ತೀರಾ?**

**ಉತ್ತರ :–** ಒಂದೇಬಾರಿ ಯಾವುದನ್ನು ನಿರ್ಣಯಿಸಿ ಯಾರೂ ಹೇಳಲಾರರು. ಏನೆಂದು ಹೇಳಿದರೂ ಅದಕ್ಕೆ ಸ್ವಲ್ಪಕ್ಕೆ ಸ್ವಲ್ಪ ಶಾಸ್ತ್ರಬದ್ಧತೆ ಅಗತ್ಯವೆಂದು ಹೇಳಿದ್ದೇನಲ್ಲ! ಸಾಯಿಬಾಬಾನನ್ನು ದೇವರೆಂದು ಹೇಳುವುದಕ್ಕಾಗಲಿ, ಅಲ್ಲವೆಂದು ಹೇಳುವುದಕ್ಕಾಗಲಿ, ಆತನು ಹೇಳಿದ ಬೋಧನೆಗಳನ್ನು ನೋಡಬೇಕಾಗಿರುತ್ತದೆ. ನಂತರ ಆತನ ಗತ ಚರಿತ್ರೆಯನ್ನು ಸಹ ಸ್ವಲ್ಪಮಟ್ಟಿಗೆ ನೋಡಬೇಕಾಗಿರುತ್ತದೆ. ಆತನ ಚರಿತ್ರೆಯಲ್ಲಿ ಆತನ ಉದ್ದೇಶ ಏನೆಂದು ತಿಳಿಯಬಲ್ಲದು. ಆತನ ಜೀವನದ ಗುರಿ ಪ್ರಪಂಚಕಡೆ ಇರುತ್ತಿತ್ತಾ? ಪರಮಾತ್ಮಕಡೆ ಇರುತ್ತಿತ್ತಾ? ಎಂದು ನೋಡಿದ ನಂತರ ಒಂದು ನಿರ್ಧಾರಕ್ಕೆ ಬರಬಹುದು. ಆದುದರಿಂದ ಶಿರಿಡಿ ಸಾಯಿಬಾಬಾರವರ ಜೀವನ ಪೂರ್ತಿ ತಿಳಿಯದಿದ್ದರೂ ತಿಳಿದಮಟ್ಟಿಗೆ ನೋಡಿ ಆತನ ಬಗ್ಗೆ ಹೇಳಬಹುದು.

**ಪ್ರಶ್ನೆ :– ಶಿರಿಡಿ ಸಾಯಿಬಾಬಾ ರವರ ಬಾಲ್ಯವಾಗಲಿ, ಯೌವ್ವನವಾಗಲಿ ಯಾರಿಗೂ ತಿಳಿದಿಲ್ಲ ಅಲ್ಲವೆ?**

**ಉತ್ತರ :–** ಬಾಲ್ಯ, ಯೌವ್ವನ ತಿಳಿಯದಿದ್ದರೂ ಫರವಾಗಿಲ್ಲ. ಆತನ ನಂತರ ಜೀವನ ಪ್ರಜೆಗಳ ಮಧ್ಯದಲ್ಲಿಯೇ ಕಳೆದುಹೋಗಿದೆ. ಆದ್ದರಿಂದ ಆತನು ಕಳೆದ ಜೀವನವನ್ನನುಸರಿಸಿ, ಹೇಳಿದ ಬೋಧನೆಯನ್ನನುಸರಿಸಿ, ಮಾಡಿದ ಮಹತ್ವ ಗಳನ್ನನುಸರಿಸಿ ಆತನನ್ನು ಸ್ವಲ್ಪಮಟ್ಟಿಗೆ ಅಂದಾಜು ಹಾಕಬಹುದು. ಅಷ್ಟೇ ಹೊರತು ಪೂರ್ತಿಯಾಗಿ ದೇವರೆಂದು ಯಾರನ್ನು ಹೇಳಲಾರೆವು.

**ಪ್ರಶ್ನೆ :– ದೇವರು ಮನುಷ್ಯನಾಗಿ ಹುಟ್ಟುವುದಿಲ್ಲವೆಂದು ಒಂದುಕಡೆ ಕ್ರೈಸ್ತರು, ಮತ್ತೊಂದುಕಡೆ ಮುಸ್ಲಿಮ್‌ರು ಒಟ್ಟಿಗೆ ಹೇಳುತ್ತಿರುವಾಗ ನೀವೇನು ಹೇಳುತ್ತೀರಾ?**

**ಉತ್ತರ :–** ಹಿಂದೂಗಳು ಮಾತ್ರ ದೇವರು ಮನುಷ್ಯನಾಗಿ ಬರಬಹುದೆಂದು ಹೇಳುತ್ತಿದ್ದಾರೆ. ಹಿಂದೂಗಳು ತಿಳಿದು ಆ ಮಾತನ್ನು ಹೇಳಲಿಲ್ಲ ಆದರೆ, ಒಂದು ನಂಬಿಕೆಯಿಂದ ಮಾತ್ರ ಹೇಳುತ್ತಿದ್ದಾರೆ. ಆದ್ದರಿಂದ ನಾಸ್ತಿಕರು, ಹೇತುವಾದಿಗಳು ಹಿಂದೂಗಳದು ಮೂಢನಂಬಿಕೆಗಳೆಂದು ಹೇಳುತ್ತಿದ್ದಾರೆ. ವಾಸ್ತವವಾಗಿ ಹೇಳಿದರೆ ದೇವರು ಮನುಷ್ಯನಂತೆ ಹುಟ್ಟಿದ್ದಾನೆಂದು, ಆತನು ಜೀವಿಸಿರುವಾಗ ಯಾರೂ ಕಂಡುಕೊಳ್ಳಲಿಲ್ಲ. 'ದೇವರು' ಎಂಬ ಹೆಸರಿನಿಂದ 'ದೇವಲ್ಪಡುವವನು' ಎಂದು ತಿಳಿಯುತ್ತಿದೆ. ಎಂದರೇ 'ಹುಡುಕಲ್ಪಡುವವನು ದೇವರು' ಎಂದು ಅರ್ಥ. ದೇವರು ಎಂದಿಗೂ ಯಾರಿಗೂ ತಿಳಿಯುವುದಿಲ್ಲವೆಂದು ಹೇಳಬಹುದು. ಕ್ರೈಸ್ತ ಮತ್ತು ಮುಸ್ಲಿಮ್‌ರ ಗ್ರಂಥಗಳೆಂದು ಹೇಳಲ್ಪಡುತ್ತಿರುವ ಬೈಬಲ್, ಖುರಾನ್ ಗ್ರಂಥಗಳಲ್ಲಿ ದೇವರು ಹುಟ್ಟುವುದಿಲ್ಲವೆಂದು ಎಲ್ಲಿಯೂ ಹೇಳಲಿಲ್ಲ. ಆದರೂ ಅವರು ಹುಟ್ಟುವುದಿಲ್ಲವೆಂದೇ ಹೇಳುತ್ತಿದ್ದಾರೆ. ಭಗವದ್ಗೀತೆಯಲ್ಲಿಯೂ ಮತ್ತು ಬೈಬಲ್, ಖುರಾನ್ ಗ್ರಂಥಗಳಲ್ಲಿಯೂ ದೇವರು ಅವತರಿಸುತ್ತಾನೆಂದೇ ಹೇಳಿದ್ದಾರೆ. ಅಷ್ಟೇ ಹೊರತು ಹುಟ್ಟುವುದಿಲ್ಲವೆಂದು ಎಲ್ಲಿಯೂ ಹೇಳಲಿಲ್ಲ. ದೇವರು ಮನುಷ್ಯನಾಗಿ ಹುಟ್ಟುವುದು ನಿಜವೇ ಆದರೆ ಆತನು ಗುರುತಿಸಲ್ಪಡುವುದು ದುಸ್ಸಾಧ್ಯ ಆದ್ದರಿಂದ ದೇವರು ಹುಟ್ಟಿದರೂ ಆತನನ್ನು ಯಾರೂ ಗುರುತಿಸಲಾರದೆ ಹೋಗಿದ್ದಾರೆ. ಗುರುತಿಸದಷ್ಟುಮಾತ್ರಕ್ಕೆ ಹುಟ್ಟುವುದಿಲ್ಲಯೆಂದು ಹೇಳುವುದಕ್ಕೆ ಸಾಧ್ಯವಿಲ್ಲ.

ಕೆಲವರು ಸಾಮಾನ್ಯ ಮಾನವರು ಹುಟ್ಟಿ ತಮ್ಮ ಜೀವನದಲ್ಲಿನ ಕೆಲವು ಪ್ರತ್ಯೇಕತೆಗಳಿಂದ ದೇವರಾಗಿ ಪ್ರಚಾರವಾಗುತ್ತಿದ್ದಾರೆ. ಅಂತವರು ನಿಜವಾಗಲು ದೇವರುಗಳು ಅಲ್ಲದಿದ್ದರೂ, ದೇವರಾಗಿಯೇ ಪ್ರಚಾರವಾಗುತ್ತಿದ್ದಾರೆ. 'ಪುರುಷರಲ್ಲಿ ಪುಣ್ಯ ಪುರುಷರು ಬೇರೆ ಅಯ್ಯಾ' ಎನ್ನುವಂತೆ, ಮನುಷ್ಯರಲ್ಲಿ ಮಹತ್ವ ಇರುವ ಮನುಷ್ಯ ಕೆಲವರಿದ್ದಾರೆ. ಮಹತ್ವಗಳು ಎರಡು ವಿಧಗಳು ಇವೆ. ಒಂದು ವಿಧವಾದ

ಮಹತ್ವ ವ್ಯಕ್ತಿಗತ ಗೌರವವನ್ನು ಬೆಳೆಸುವುದಾಗಿದ್ದು, ಪ್ರಪಂಚ ಸಂಬಂಧವಾದು ದಾಗಿರುತ್ತದೆ. ಮತ್ತೊಂದು ವಿಧವಾದ ಮಹತ್ವ ಮನುಷ್ಯನಲ್ಲಿ ಕಾಣಿಸಿದರೂ ಅವು ದೈವಜ್ಞಾನಕ್ಕೆ ಬೆಲೆಯನ್ನು, ಗೌರವವನ್ನು ಬೆಳೆಸುವು ದಾಗಿರುತ್ತದೆ. ಅಂತಹವರ ಬಗ್ಗೆ ನಡೆಯುವ ಮಹತ್ವಗಳನ್ನು ವ್ಯಕ್ತಿತ್ವಕ್ಕೆ ಸಂಬಂಧಿಸಿರುವವು ಅಲ್ಲವೆಂದು ದೈವಿಕವೆಂದು ತಿಳಿಯಬಹುದು. ಆದರೆ ಅಂತಹ ಮಹತ್ವಗಳು ಅಪರೂಪವಾಗಿ ನಡೆಯುತ್ತಿರುತ್ತವೆ. ಅವುಗಳನ್ನು ಮನುಷ್ಯರು ದೈವಿಕವಾದವುಗ ಳಾಗಿ ಗುರುತಿಸಲಾರರು.

**ಪ್ರಶ್ನೆ :– ನಿಮಗೆ ತಿಳಿದಮಟ್ಟಿಗೆ ಸಾಯಿಬಾಬಾ ಜೀವನವನ್ನು ವಿಶ್ಲೇಷಿಸಿ ಏನೆಂದು ಹೇಳುತ್ತೀರ?**

**ಉತ್ತರ :–** ಎಲ್ಲರೂ ಅನ್ನುವಂತೆ ನಾನೂ ಸಹ ಶಿರಿಡಿ ಸಾಯಿಬಾಬಾರವರು ಮುಸ್ಲಿಮ್ ಮತಕ್ಕೆ ಸೇರಿದವನೆಂದು ಒಪ್ಪಿಕೊಳ್ಳುತ್ತಿದ್ದೇನೆ. ಆದರೆ ಆತನ ಜೀವನ ಎಲ್ಲರಿಗೂ ಸ್ವಲ್ಪಮಟ್ಟಗೆ ತಿಳಿದಿದೆ. ನನಗೆಮಾತ್ರ ಇತರರಿಗೆ ತಿಳಿಯದ ಆತನ ಜೀವನ ಮತ್ತೆ ಸ್ವಲ್ಪ ತಿಳಿದಿದೆಯೆಂದು ಹೇಳುತ್ತಿದ್ದೇನೆ. ಇತರರಿಗೆ ತಿಳಿದಿರುವು ದಕ್ಕಿಂತ ಹೆಚ್ಚಾಗಿ ಆತನ ಜೀವನದ ಬಗ್ಗೆ ತಿಳಿದಿರುವುದರಿಂದ, ಎಲ್ಲರಿಗಿಂತ ನನಗೇ ಆತನ ಬಗ್ಗೆ ಅವಗಾಹನೆ ಬಹಳ ಹೆಚ್ಚಾಗಿ ಇದೆಯೆಂದು ಹೇಳುತ್ತಿದ್ದೇನೆ. ಶಿರಿಡಿ ಸಾಯಿಬಾಬಾನನ್ನು ಕುರಿತು ನನಗೆ ನಿಮಗಿಂತ ಹೆಚ್ಚು ವಿಷಯ ಹೇಗೆ ತಿಳಿದಿದೆಯೋ ನಿಮಗೆ ವಿವರವಾಗಿ ಹೇಳುತ್ತೇನೆ ಕೇಳಿರಿ. ನನ್ನಿಂದ ಎಂದರೇ ನನಗೆ ತಿಳಿದ ವಿಷಯ ನಿಮಗೂ ಸಹ ತಿಳಿಯುವುದರಿಂದ ನೀವು ಸಹ ಆತನ ಬಗ್ಗೆ ಪ್ರತ್ಯೇಕವಾದ ಅವಗಾಹನೆಯೊಳಗೆ ಬರುತ್ತೀರಾ.

ಇಲ್ಲಿಗೆ ಸುಮಾರು 38 ವರ್ಷಗಳ ಕೆಳಗೆ ನಾನು ಅನಂತಪುರ ಜಿಲ್ಲೆ ಪೆನುಗೊಂಡ ಪ್ರಾಂತಕ್ಕೆ ಹೋಗಿದ್ದೆನು. ಶರೀರ ಸಂಬಂಧಿಕರಾದ ಸ್ವಂತ ತಮ್ಮನು ಆ ಊರಿನಲ್ಲಿ ಇರುವಾಗ ಆತನಿಗೆ ಒಂದುಬಾರಿ ಆರೋಗ್ಯ ಚೆನ್ನಾಗಿಲ್ಲದಂತಾಗಿದೆ. ಆಗ ಆತನಿಗೆ ನಾನು ವೈದ್ಯ ಮಾಡುವುದಕ್ಕಾಗಿ ಅಲ್ಲಿಗೆ ಹೋಗುವುದಾಗಿದೆ.

ಅಲ್ಲಿ ನಾನು ಸ್ವಲ್ಪ ದಿನಗಳು ಇರುವುದೂ, ಅಲ್ಲಿರುವ ಕಾಲದಲ್ಲಿ ಎಷ್ಟೋ ಸಂಘಟನೆಗಳು ನಡೆಯುವುದು. ಆ ಸಂಘಟನೆಗಳಲ್ಲಿ ಎಷ್ಟೋ ಹೊಸ ವಿಷಯಗಳು ತಿಳಿಯುವುದು ನಡೆದಿದೆ. ಆ ಸಮಯದಲ್ಲಿಯೇ ಪ್ರತ್ಯೇಕಿಸಿ ಶಿರಿಡಿ ಸಾಯಿಬಾಬಾರವರ ವಿಷಯಗಳು ಬಹಳ ತಿಳಿದಿವೆ. ಆಗ ನನಗೆ ತಿಳಿದ ಸಾಯಿಬಾಬಾರವರ ಜೀವನದ ವಿಷಯಗಳೆಲ್ಲವೂ ಇತರರಿಗ್ಯಾರಿಗೂ ತಿಳಿಯದಿರುವವಾಗಿವೆ. ಆದ್ದರಿಂದ ಆ ವಿಷಯಗಳೆಲ್ಲವೂ ನಿಮಗೆ ತಿಳಿಯುವಂತೆ ಇಲ್ಲಿ ವಿವರವಾಗಿ ತಿಳಿಸುತ್ತಿದ್ದೇನೆ ನೋಡಿರಿ.

ಅನಂತಪುರ ಜಿಲ್ಲೆಯಲ್ಲಿ ಪೆನುಕೊಂಡವನ್ನು ತಿಳಿಯದವರಿರುವುದಿಲ್ಲ. ಏಕೆಂದರೇ ಆ ಗ್ರಾಮ ಕೃಷ್ಣದೇವರಾಯರ ಕಾಲದಿಂದ ಚರಿತ್ರೆ ಹೊಂದಿದೆ. ಬಹಳಜನರಿಗೆ ತಿಳಿದೇ ಇರುತ್ತದೆ. ಪೆನುಕೊಂಡಗೆ ಕೇವಲ ಏಳು ಕಿಲೋಮೀಟರ್ ದೂರದಲ್ಲಿ 'ಮಾವುಟೂರು' ಎಂಬ ಒಂದು ಚಿಕ್ಕ ಗ್ರಾಮವಿದೆ. ಆ ಊರಿನಲ್ಲಿ ನಾನು ಒಂದು ವಾರದ ದಿನಗಳು ಇದ್ದೇನೆ. ನಾನು ಆ ಊರಿನಲ್ಲಿ ಇರುವ ಸಮಯದಲ್ಲಿ, ಅಲ್ಲಿ ಚಿಕ್ಕಮಕ್ಕಳಿಗೆ ಮೆದಳುಬಾವು ಜ್ವರಗಳು ಹೆಚ್ಚಾಗಿದ್ದವು, ಆ ಊರಿನಿಂದ ಮೆದಳುಬಾವು ಜ್ವರ ಬಂದಿರುವ ಆರುವರ್ಷಗಳ ವಯಸ್ಸಿರುವ ಹೆಣ್ಣು ಮಗುವನ್ನು ಪೆನುಕೊಂಡ ಆಸ್ಪತ್ರೆಗೆ ತೆಗೆದುಕೊಂಡು ಹೋಗಿದ್ದಾರೆ. ಅಲ್ಲಿ ಮೂರು ದಿನಗಳು ಚಿಕಿತ್ಸೆ ಮಾಡಿದ್ದಾರೆ. ಅಲ್ಲೋಪತಿ ಚಿಕಿತ್ಸೆಗೆ ಆ ರೋಗ ಗುಣವಾಗಲಿಲ್ಲ. ಇನ್ನೊಂದು ಅರ್ಧಗಂಟೆ ಸಹ ಬದುಕುವುದಿಲ್ಲಯೆಂದು ಡಾಕ್ಟರ್‌ಗಳಿಗೆ ಅರ್ಥವಾಗಿದೆ. ಅಂತಹ ಸ್ಥಿತಿಯಲ್ಲಿ ಮಗು ಬದುಕುವುದಿಲ್ಲ, ಮನೆಗೆ ತೆಗೆದುಕೊಂಡುಹೋಗಿ ಎಂದು ಹೇಳಿದಾಗ ತಾಯಿ ತಂದೆಯರು ಮನೆಗೆ ತಂದುಕೊಂಡಿದ್ದಾರೆ. ಮನೆಯಲ್ಲಿ ಸಂಬಂಧಿಕರೆಲ್ಲರೂ ಆ ಹುಡುಗಿ ಯಸುತ್ತಲೂ ಸೇರಿ ಅಳುತ್ತಿದ್ದಾರೆ. ಆ ಊರಿನಲ್ಲಿ ಎಲ್ಲರಿಗಿಂತ ಸ್ವಲ್ಪ ಅನುಕೂಲವಾಗಿರುವ ಕುಟುಂಬ ಆ ಹುಡುಗಿ ಮನೆಯವರೆ. ಆ ಹುಡಿಗಿಯ ಮಾವ ಆ ಊರಿನ ಪ್ರೇಸಿಡೆಂಟಾಗಿ ಕೆಲಸ ಮಾಡುತ್ತಿದ್ದಾರೆ. ಪ್ರೇಸಿಡೆಂಟ್‌ನ ತಂದೆ ಎಂದರೆ ಹುಡುಗಿಯ ತಾತನವರು ನನ್ನ ಹತ್ತಿರಕ್ಕೆ ಬಂದು ಹುಡುಗಿಯನ್ನು

ಸ್ವಲ್ಪ ನೋಡಿರೆಂದನು. ನಾನು ಡಾಕ್ಟರ್‌ನೆಂದು ಆ ಊರಿನಲ್ಲಿ ಸ್ವಲ್ಪ ಜನರಿಗೆ ತಿಳಿದಿದೆ. ಆದ್ದರಿಂದ ಆತನು ಬಂದು ನನ್ನನ್ನು ಕರೆಯುವುದು ನಡೆದಿದೆ. ನಾನು ಸಂಬಂಧಿಕರ ಮನೆಗೆ ಹೋದವನು, ನನ್ನ ಹತ್ತಿರ ಚಿಕಿತ್ಸೆ ಮಾಡುವುದಕ್ಕೆ ಯಾವ ಔಷಧಿಗಳು ಇಲ್ಲ. ಆ ದೊಡ್ಡಮನುಷ್ಯ ಕರೆದಾಗ ನಾನು ಬರುವುದಿಲ್ಲ ಎಂದರೇ ಚೆನ್ನಾಗಿರುವುದಿಲ್ಲವೆಂದು ಹೋಗಿದ್ದೇನೆ. ಅಲ್ಲಿ ಆ ಮಗು ಅಪಸ್ಮಾರಕ ಸ್ಥಿತಿಯಲ್ಲಿ (ಕೋಮಾದಲ್ಲಿ) ಇದೆ. ಕಾಲು ಕೈಗಳು ತಣ್ಣಗಾಗಿಹೋಗಿವೆ. ಶರೀರದಲ್ಲಿ ಬಿಸಿ ಕಡಿಮೆಯಾಗಿದೆ. ಶ್ವಾಸ ಆಡಿ ಆಡದೆ ಇದೆ. ಒಟ್ಟಾರೆ ಆ ಮಗು ಪ್ರಾಣದಿಂದ ಇದ್ದರೂ, ಒಂದು ಐದು ಅಥವಾ ಹತ್ತು ನಿಮಿಷಗಳಿಗಿಂತ ಹೆಚ್ಚು ಸಮಯ ಬದುಕುವುದಿಲ್ಲ ಎನಿಸುತ್ತಿದೆ.

ಆ ಮಗುವನ್ನು ನೋಡಿ ಏನೋ ಒಂದು ಮಾಡಬೇಕೆನಿಸಿದೆ. ಕೂಡಲೇ ಸಾಸುವೆಯನ್ನು ತರಿಸಿ, ಅವುಗಳನ್ನು ಹಿಟ್ಟು ಮಾಡಿಸಿ, ಆ ಹಿಟ್ಟನ್ನು ನೀರಿನಲ್ಲಿ ಬೆರೆಸಿ ದೊಡ್ಡ ತಟ್ಟೆಯಲ್ಲಿ ಸುರಿಸಿ, ಆ ಮಗುವನ್ನು ಆ ನೀರಿನಲ್ಲಿ ಮಲಗಿಸಿದ್ದೇವೆ. ಆ ನೀರಿನಿಂದಲೇ ತೋಯದ ಕಡೆಯೆಲ್ಲ ತೋಯಿಸಿದ್ದೇವೆ. ಹಾಗೆ ಮಾಡಿದ ಐದು ನಿಮಿಷಕ್ಕೆ, ಆ ಮಗು ಕಣ್ಣು ತೆರೆದು ನೋಡಿದೆ. ಶರೀರವೆಲ್ಲಾ ಬಿಸಿಯಾಗಿದೆ. ಶ್ವಾಸ ಸಹ ಚೆನ್ನಾಗಿ ಆಡಲು ಪ್ರಾರಂಭಿಸಿದೆ. ಸತ್ತುಹೋಗುತ್ತಾಳೆಂದುಕೊಂಡ ಮಗು ಬದುಕುವುದು, ಆ ಊರಿನವರಿಗೆಲ್ಲ ತಿಳಿದುಹೋಗಿದೆ. ಅದರಿಂದ ಅಲ್ಲಿರುವವರೆಲ್ಲರೂ ನನ್ನನ್ನು ದೊಡ್ಡ ವೈದ್ಯನನ್ನಾಗಿ ಲೆಕ್ಕಿಸಿಕೊಂಡಿದ್ದಾರೆ. ಮಗುವಿನ ವಿಷಯ ನಡೆದ ಮೂರು ದಿನಗಳಿಗ ನಾನಿರುವ ಮನೆಗೆ ಸ್ವಲ್ಪ ದೂರದಲ್ಲಿಯೇ ಒಬ್ಬ ತುಂಬುಗರ್ಭಿಣಿ ಸ್ತ್ರೀಗೆ ಆರೋಗ್ಯ ಚೆನ್ನಾಗಿಲ್ಲವೆಂದು, ಮಾತನಾಡದಂತೆ ಬಿದ್ದಹೋಗಿದ್ದಾಳೆಂದು, ನೀವು ಬಂದು ನೋಡಿರೆಂದು ಕರೆದಿದ್ದಾರೆ. ಸರಿಯೆಂದು ಹೋಗಿ ನೋಡಿದರೆ, ಗರ್ಭಿಣಿ ಸ್ತ್ರೀಯಾದ ಆಕೆ ಮಾತನಾಡದ ಸ್ಥಿತಿಯಲ್ಲಿ ಅಪಸ್ಮಾರಕದಲ್ಲಿದ್ದಾಳೆ. ಆಗ ನಾನು ನೀರನ್ನು ಆಕೆಯ ಮುಖದ ಮೇಲ ಚೆಲ್ಲಿದ್ದೇನೆ. ನೀರು ಮುಖದ ಮೇಲೆ ಬೀಳುತ್ತಲೇ ತಕ್ಷಣ ಜ್ಞಾಪಕದೊಳಗೆ ಬಂದಿದ್ದಾಳೆ. ನಂತರ ಎದ್ದು ಕುಳಿತುಕೊಂಡಿದ್ದಾಳೆ ಆಕೆಗೆ ಸ್ವಲ್ಪ ನೀರು ಕುಡಿಸಿ

ಏನು ಆಗುವುದಿಲ್ಲ ಎಂದು ಹೇಳಿ ಬಂದೆನು. ಆಕೆ ಪರಿಸ್ಥಿತಿಯನ್ನು ಗಮನಿಸಿದ ನನಗೆ, ಅದು ಆರೋಗ್ಯದಿಂದ ನಡೆದಿರುವುದು ಅಲ್ಲವೆಂದು, ಸೂಕ್ಷ್ಮ ಶರೀರವೊಂದರ ಪ್ರಭಾವದಿಂದಲೇ ನಡೆದಿದೆಯೆಂದು ಅರ್ಥವಾಗಿದೆ. ಆದರೂ ಆ ವಿಷಯ ಅವರಿಗೆ ಹೇಳದಂತೆ ಬಂದುಬಿಟ್ಟೆನು.

ನಾನು ಮನೆಗೆ ಬಂದ ನಂತರ ಇಪ್ಪತ್ತು ನಿಮಿಷಗಳಿಗೆ ಗರ್ಭಿಣಿಯಾದ ಆಕೆ ಬಂದಿದ್ದಾಳೆ. ಆಕೆಯನ್ನು ಕುಳಿತುಕೊಳ್ಳಿ ಎಂದು ಹೇಳುತ್ತಲೇ ಆಕೆ ಕುರ್ಚಿಯಲ್ಲಿ ಕುಳಿತುಕೊಳ್ಳದೆ ಕೆಳಗೆ ಕುಳಿತುಕೊಂಡಿದ್ದಾಳೆ. "ಸಮಯಕ್ಕೆ ನೀವು ಬಂದು ನೋಡಿದಕ್ಕೆ ನಿಮಗೆ ಕೃತಜ್ಞತೆಗಳು ಹೇಳುತ್ತಿದ್ದೇನೆ." ಎಂದು ನನಗೆ ನಮಸ್ಕರಿಸಿದ್ದಾಳೆ. "ಹಾಗೆ ನನಗೆ ನಮಸ್ಕರಿಸಬಾರದು. ನಾನು ನಿಮ್ಮಂತ ಮನುಷ್ಯನೇ, ನಮಸ್ಕಾರಕ್ಕೆ ಅರ್ಹನು ದೇವರು ಒಬ್ಬನೇಯೆಂದು" ಹೇಳಿದ್ದೇನೆ. ಆ ಮಾತು ಕೇಳಿದ ನಂತರ ಒಂದು ನಿಮಿಷಕ್ಕೆ ಮಾಮೂಲಾಗಿ ಕುಳಿತುಕೊಂಡ ಆಕೆ ಒಂದು ಪಕ್ಕಕ್ಕೆ ಕಾಲುಗಳನ್ನು ಹಿಂದಕ್ಕೆ ಮಡಿಚಿ ಕುಳಿತುಕೊಂಡು, ನಂತರ ತಲೆ ಮೇಲೆ ಮುಸುಗು ಹಾಕಿಕೊಂಡು, ತಲೆಕೆಳಗೆ ಬಗ್ಗಿಸಿಕೊಂಡು ಕುಳಿತು ಕೊಳ್ಳುವುದು ನಡೆದಿದೆ. ಹಾಗೆ ಕುಳಿತುಕೊಂಡ ನಂತರ "ನಿಮಗೆ ಧನ್ಯವಾದಗಳು ಹೇಳುತ್ತಿದ್ದೇನೆ ಸ್ವಾಮಿ!" ಎಂದಳು. ಅಲ್ಲಿಯವರೆಗು ನನ್ನನ್ನು ಸ್ವಾಮಿ ಎಂದು ಊರಿನಲ್ಲಿ ಯಾರೂ ಅನ್ನಲಿಲ್ಲ. ಡಾಕ್ಟರ್‌ಯೆಂದು, ಸಾರ್ ಎಂದು ಅನ್ನುತ್ತಿದ್ದರು. ಆಕೆ ಕುಳಿತುಕೊಂಡ ರೀತಿಯನ್ನನುಸರಿಸಿ, ಮಾತನಾಡುವ ಮಾತನ್ನನುಸರಿಸಿ ಮೊದಲು ಬಂದಾಕೆ ಅಲ್ಲವೆಂದು ನನಗೆ ಅರ್ಥವಾಗಿದೆ. ಆಗ ನಾನು ಆಕೆಯನ್ನು ನೀನು ಯಾರು? ಎಂದು ಕೇಳಿದೆನು.

**ಆಕೆ** :– ಸ್ವಾಮಿ! ನನ್ನ ಹೆಸರು ಅಂಬೋಜಮ್ಮ. ನಾನು ನಿಮ್ಮ ಹತ್ತಿರಕ್ಕೆ ಬಂದ ಗರ್ಭಿಣಿ ಮನುಷ್ಯಳಲ್ಲ.

**ನಾನು** :– ನೀನು ಹಾಗೆ ಕುಳಿತುಕೊಂಡಾಗಲೆ ನನಗೆ ಅರ್ಥವಾಯಿತು. ನೀನು ಯಾರು, ಏಕೆ ಬಂದಿದ್ದೀಯ?

**ಆಕೆ** :– ನನ್ನದು ಈ ಊರು ಅಲ್ಲ ಪೆನುಕೊಂಡ. ಈಕೆ ಪೆನುಕೊಂಡ ಬಾಬಾರವರ ಭಕ್ತಳು.

**ನಾನು** :– ಬಾಬಾರವರು ಪುಟ್ಟಪರ್ತಿಯಲ್ಲಿದ್ದಾರೆ. ನೀನು ಪೆನುಕೊಂಡ ಬಾಬಾ ಎನ್ನುತ್ತೀಯ. ನೀನು ಹೇಳುವ ಬಾಬಾ ಯಾರು? ಪುಟ್ಟಪರ್ತಿ ಬಾಬಾ ಅಲ್ಲವಾ?

**ಆಕೆ** :– ಪುಟ್ಟಪರ್ತಿ ಬಾಬಾರವರಲ್ಲ. ಪೆನುಕೊಂಡದಲ್ಲಿಯೆ ಬಾಬಾ ಫಕರುದ್ದೀನ್‌ರವರನ್ನು, ಪೆನುಕೊಂಡ ಬಾಬಯ್ಯ ಎಂದು ಪ್ರಜೆಗಳು ಕರೆಯುತ್ತಿರುತ್ತಾರೆ. ಈಕೆ ಬಾಬಾ ಫಕರುದ್ದೀನ್‌ರವರ ಭಕ್ತಳು. ಈಕೆ ನಿಮ್ಮ ಹತ್ತಿರಕ್ಕೆ ಬಂದಿದ್ದಾಳೆ, ನಾನು ಸಹ ನಿಮ್ಮೊಂದಿಗೆ ಮಾತನಾಡಬೇಕೆಂದು ಬಂದಿದ್ದೇನೆ.

**ನಾನು** :– ಈಕೆಯದು ಮಾವುಟೂರು, ನಿನ್ನದು ಪೆನುಕೊಂಡ. ಈಕೆ ನಿನಗೇನಾದರು ಸಂಬಂಧಿಕಳಾಗುತ್ತಾಳಾ?

**ಆಕೆ** :– ಈಕೆ ನನಗೆ ಸಂಬಂಧಿಯಲ್ಲ. ಸಂಬಂಧವಲ್ಲದೆ ಹೋದರೂ ನಮಗೆ ಬಂಧುಗಳಿಗಿಂತ ಹೆಚ್ಚಿನ ಸಂಬಂಧವಿದೆ. ಈಕೆ ಹಿಂದುವು, ಹಿಂದೂಗಳು ಬಹಳ ಜನ ಬಾಬಯ್ಯನವರ ಹತ್ತಿರಕ್ಕೆ ಬರುತ್ತಿರುತ್ತಾರೆ. ಆದರೆ ಅವರಲ್ಲಿ ಈಕೆ ಬಾಬಯ್ಯನವರಿಗೆ ದೊಡ್ಡ ಭಕ್ತಳು. ಪ್ರತಿ ವಾರ ಪೆನುಕೊಂಡಗೆ ಬಂದು ಬಾಬಾರವರ ದರ್ಗಾವನ್ನು ದರ್ಶನಮಾಡಿಕೊಂಡು, ಪ್ರದಕ್ಷಿಣೆಗಳು ಮಾಡಿ ಬರುತ್ತಾಳೆ. ಈಕೆಗೆ ಬಾಬಯ್ಯನವರ ಮೇಲೆ ಹೆಚ್ಚಿನ ಭಕ್ತಿ ಇರುವುದರಿಂದ, ಈಕೆ ಸಹ ಮನೆಯಲ್ಲಿಯೆ ನಮಾಜ್ ಮಾಡುತ್ತಾಳೆ. ಈಕೆಗಿರುವ ಇಬ್ಬರು ಮಕ್ಕಳಿಗೆ ಮುಸ್ಲಿಮ್‌ರ ಹೆಸರುಗಳೆ ಇಟ್ಟಿದ್ದಾಳೆ. ತನ್ನ ಹೆಸರನ್ನು ಸಹ ಬದಲಾಯಿಸಿಕೊಂಡಿದ್ದಾಳೆ.

**ನಾನು** :– ಇರುವ ಹೆಸರನ್ನು ತೆಗೆದು ಇಲ್ಲದ ಹೆಸರನ್ನು ಏಕೆ ಇಟ್ಟುಕೊಂಡಿದ್ದಾಳೆ?

**ಆಕೆ** :– ಈಕೆಗೆ ಮದುವೆಯಾದಾಗಿನಿಂದ ಈಕೆಯಲ್ಲಿ ಒಂದು ದೆವ್ವ ಸೇರಿ

ಪೀಡಿಸುತ್ತಿತ್ತು. ಅದರಿಂದ ಈಕೆ ಸ್ವಲ್ಪ ಅನಾರೋಗ್ಯದಿಂದ ಇರುತ್ತಿದ್ದಳು. ಯಾವ ದೇವತೆಗೆ ಕೈ ಮುಗಿದರೂ ಈಕೆಯನ್ನು ಆ ದೆವ್ವ ಬಿಡಲಿಲ್ಲ, ಆರೋಗ್ಯ ಸರಿಯಾಗಲಿಲ್ಲ. ಕೊನೆಗೆ ಬಾಬಾರವರ ಹತ್ತಿರಕ್ಕೆ ಬಂದು ಕೆಲವು ದಿನಗಳು ಸೇವೆ ಮಾಡಿದಳು. ನಂತರ ದೆವ್ವ ಹೋಗಿದೆ. ಆರೋಗ್ಯ ಸರಿಯಾಗಿದೆ. ಆಗಿನಿಂದ ದೇವತೆಗಳನ್ನು ಬಿಟ್ಟು ಹಾಕಿ ಬಾಬಾರವರನ್ನೇ ಆರಾಧಿಸುತ್ತಿದ್ದಾಳೆ. ಬಾಬಾರವರು ಹೆಸರು ಬದಲಾಯಿಸಿಕೊಂಡ ಹಾಗೆ ಈಕೆಯು ಸಹ ಬದಲಾಯಿಸಿಕೊಂಡಿದ್ದಾಳೆ.

**ನಾನು** :– ಬಾಬಾರವರು ಹೆಸರು ಬದಲಾಯಿಸಿಕೊಂಡಿದ್ದಾರಾ?

**ಆಕೆ** :– ಹೌದು, ಬಾಬಾರವರು ಸಹ ಬದಲಾಯಿಸಿಕೊಂಡಿದ್ದಾರೆ. ಬಾಬಾರವರನ್ನೇ ಆದರ್ಶವಾಗಿ ತೆಗೆದುಕೊಂಡು, ಆಕೆಯು ಸಹ ಹಾಗೆ ಬದಲಾಗಿದ್ದಾಳೆ. ಬಾಬಾರವರಿಗು ಸಹ ಈಕೆ ಮೇಲೆ ಹೆಚ್ಚಿನ ಪ್ರೇಮ. ತಂದೆ ಪ್ರೀತಿಗಿಂತ ಹೆಚ್ಚಿನ ಪ್ರೇಮವನ್ನು ತೋರಿಸುತ್ತಾನೆ. ಆದ್ದರಿಂದಲೆ ಈಕೆಗಿರುವ ದೆವ್ವವನ್ನು ಬಿಡಿಸಿ ಯಾವ ದೆವ್ವವು ಈಕೆ ಹತ್ತಿರಕ್ಕೆ ಬಾರದಹಾಗೆ ನನ್ನನ್ನು ಕಾವಲು ಇಟ್ಟಿದ್ದಾನೆ.

**ನಾನು** :– ನೀನು ಹೇಳುವುದು ನನಗೇನು ಅರ್ಥವಾಗಲಿಲ್ಲ. ಬಾಬಯ್ಯನನ್ನು ಕೈ ಮುಗಿದಿರುವುದು, ಆರೋಗ್ಯ ಸರಿಯಾಗಿರುವುದು ಸರಿ, ಈಕೆ ಹೆಸರು ಬದಲಾಯಿಸಿಕೊಂಡಿದ್ದು ಸರಿ ಅದು ಈಕೆಯ ಇಷ್ಟ, ಆದರೆ ಇಲ್ಲಿ ಅರ್ಥವಾಗದಿರುವುದು, ಬಾಬಯ್ಯ ಈಕೆಯನ್ನು ಮಗಳಿಗಿಂತ ಹೆಚ್ಚಾಗಿ ಪ್ರೀತಿಸುತ್ತಿದ್ದಾನೆ ಎನ್ನುತ್ತೀಯಲ್ಲ! ಹಾಗಾದರೆ ಬಾಬಯ್ಯ ಈಗ ಇದ್ದಾನಾ? ಪ್ರತಿ ವರ್ಷ ದೊಡ್ಡದಾಗಿ ಜಾತ್ರೆ ನಡೆಯುತ್ತದೆಂದು, ಆ ದಿನ ಅಲ್ಲಿಯೆ ಇರುವ ಗಿಡದಿಂದ ಸಕ್ಕರೆ ಬೀಳುತ್ತದೆಂದು ಕೇಳಿದ್ದೇನೆ. ನಾನು ಯಾವಾಗಲು ಅಲ್ಲಿಗೆ ಹೋಗಲಿಲ್ಲ, ನೋಡಲಿಲ್ಲ. ಆ ದರ್ಗಾವನ್ನು ಕುರಿತೇನಾ ನೀನು ಹೇಳುತ್ತಿರುವುದು?

**ಆಕೆ** :– ಹೌದು, ಆ ದರ್ಗಾವನ್ನು ಕುರಿತೆ ಹೇಳುತ್ತಿದ್ದೇನೆ. ಬಾಬಯ್ಯನವರು ಸುಮಾರು ಐದು (500) ನೂರು ವರ್ಷ ಕೆಳಗಿನಿಂದ ಇಂದಿಗೂ ಇದ್ದಾನೆ.

ಪೆನುಕೊಂಡ ದರ್ಗಾದ ಹತ್ತಿರವೆ ಇದ್ದಾನೆ. ನಿಮಗೆ ಅರ್ಥವಾಗದೆ ಹೋದರೆ ವಿವರವಾಗಿ ಹೇಳುತ್ತೇನೆ.

**ನಾನು** :– ಬಾಬಾ ಯಾರು? ಮುಸ್ಲಿಮ್ ಮತಕ್ಕೆ ಸೇರಿದವರ ಹೆಸರು ಬಾಬಾ ಎಂದು ಇರುವುದಿಲ್ಲ ಅಲ್ಲವೆ! ಆತನು ಈಗಲೂ ಸಹ ಹೇಗಿದ್ದಾನೆ? ಆತನ ವಯಸ್ಸೆಷ್ಟು? ಆತನು ಏನು ಮಾಡುತ್ತಿರುತ್ತಾನೆ? ಆತನು ಮನುಷ್ಯನಾ? ಅಲ್ಲವಾ? ಎಲ್ಲ ವಿವರವಾಗಿ ಹೇಳಿದರೆ ಚೆನ್ನಾಗಿರುತ್ತದೆ.

**ಆಕೆ** :– ಎಲ್ಲಾ ವಿವರವಾಗಿ ಹೇಳುತ್ತೇನೆ. ಎಲ್ಲಾ ವಿಷಯಗಳು ನಿಮಗೆ ತಿಳಿದರೆ ಚೆನ್ನಾಗಿರುತ್ತದೆ. ಸುಮಾರು ಐದು (500) ನೂರು ವರ್ಷಗಳ ಕೆಳಗಿನ ಕಾಲದಲ್ಲಿ ಪೂರ್ವಗೋದಾವರಿ ಜಿಲ್ಲೆಯಲ್ಲಿ ಕ್ಷತ್ರಿಯರ (ರಾಜರ) ಕುಟುಂಬದಲ್ಲಿ ಸತ್ಯಂರಾಜ ಎಂಬ ವ್ಯಕ್ತಿ ಹುಟ್ಟಿದನು. ಆತನು ಸುಮಾರು ನಲವತ್ತು ವರ್ಷಗಳ ವಯಸ್ಸಿನಲ್ಲಿ ಮನೆ ಬಿಟ್ಟು ದೈವಜ್ಞಾನವನ್ನು ತಿಳಿದುಕೊಳ್ಳಬೇಕೆಂದು, ಅದನ್ನು ತಿಳಿಸುವ ಗುರುವಿಗಾಗಿ ಅನ್ವೇಷಣೆ ಮಾಡುತ್ತಾ ಊರು ಬಿಟ್ಟು ಬಂದನು. ಆತನಿಗೆ ಗುರು ಎಲ್ಲಿಯೂ ಕಾಣಿಸಲಿಲ್ಲ. ಪೂರ್ವ ಗೋದಾವರಿ ಜಿಲ್ಲೆಯಿಂದ ಕಾಲ್ನಡಿಗೆಯಲ್ಲಿಯೆ ತಿರುಗುತ್ತಾ ಪಶ್ಚಿಮ ಗೋದಾವರಿ, ಕೃಷ್ಣ, ಗುಂಟೂರು, ಒಂಗೋಲು, ನೆಲ್ಲೂರು, ಚಿತ್ತೂರು ಜಿಲ್ಲೆಗಳು ಎಲ್ಲವನ್ನು ದಾಟಿ, ಮೂರು ವರ್ಷಗಳಿಗೆ ಅನಂತಪುರ ಜಿಲ್ಲೆ ಪೆನುಕೊಂಡ ಪ್ರಾಂತಕ್ಕೆ ಬಂದನು. ಆ ವಿಧವಾಗಿ ಏಳು ಜಿಲ್ಲೆಗಳು ದಾಟಿ ಬಂದ ಸತ್ಯಂರಾಜ ಕೊನೆಗೆ ಬಿಕಾರಿಯಾದನು. ಏನು ಸಿಕ್ಕರೆ ಅದನ್ನು ತಿಂದು, ಎಲ್ಲಂದರಲ್ಲೆ ಮಲಗುತ್ತಿದ್ದನು. ಒಂದು ದಿನ ಪೆನುಕೊಂಡ ಕೋಟೆಯೊಳಗೆ ಹೋಗಿ ಅಲ್ಲಿ ಸಿಕ್ಕಿದ್ದು ತಿಂದು, ಕೋಟೆ ಪಕ್ಕದಲ್ಲಿ ಬೆಟ್ಟದ ಮೇಲೆ ನೆರಳು ಇದ್ದ ಜಾಗದಲ್ಲಿ ಕುಳಿತುಕೊಂಡನು. ಆಗಿನ ಕಾಲದಲ್ಲಿ ಪೆನುಕೊಂಡ ಕೋಟೆಯನ್ನು ಒಬ್ಬ ಸಾಮಂತರಾಜ ಪಾಲಿಸುತ್ತಿದ್ದನು. ಐದು (500) ನೂರು ವರ್ಷಗಳ ಕಾಲದಲ್ಲಿ ಪೆನುಕೊಂಡ ಕೋಟೆ, ಕೃಷ್ಣದೇವರಾಯರ ವಂಶದವರ ಪಾಲನೆಯಲ್ಲಿ ಇದ್ದಿತು. ಕೋಟೆಯಲ್ಲಿ ಇರುವವರು ಇಟ್ಟಿದ್ದು ತಿಂದು ಸತ್ಯಂರಾಜು

ಬೆಟ್ಟದ ಮೇಲೆಯೆ ಒಂದು ಗಿಡದ ಕೆಳಗೆ ಕುಳಿತು ನನಗೆ ಗುರು ದೊರಕುವು ದಿಲ್ಲವಾ? ಜ್ಞಾನ ತಿಳಿಯುವುದಿಲ್ಲವಾ? ಎಂದು ಆಲೋಚಿಸುತ್ತಾ ಮನಸ್ಸಿನಲ್ಲಿಯೆ ನೋವನ್ನು ಅನುಭವಿಸುತ್ತಿದ್ದನು.

ಅಷ್ಟರಲ್ಲಿ ಒಂದು ಮಾತು ಆತನಿಗೆ ಕೇಳಿಸಿತು. "ನೀನು ನನ್ನ ಹತ್ತಿರಕ್ಕೆ ಬಾ" ಎಂದು ಕೇಳಿಸಿದಾಗ, ಆತನಿಗೆ ಏನೂ ಅರ್ಥವಾಗದೆ ಸುತ್ತಮುತ್ತ ತಿರುಗಿ ನೋಡಿದನು. ಆತನಿಗೆ ಯಾರೂ ಕಾಣಿಸಲಿಲ್ಲ, ನನ್ನನ್ನು ಯಾರು ಕರೆದರು, ಎಲ್ಲಿಂದ ಕರೆದರು? ಎಂದು ಆಲೋಚಿಸುತ್ತಿರುವಾಗ ಮತ್ತೊಂದು ಬಾರಿ ಅದೇ ಮಾತು ಕೇಳಿಸಿತು. ಆ ಶಬ್ದ ಬಂದ ಕಡೆ ನೋಡಿದರೆ ಎರಡು ದೊಡ್ಡ ಕಲ್ಲಿನ ಗುಂಡುಗಳು ಕಾಣಿಸಿದವು. ಆ ಎರಡು ಗುಂಡುಗಳ ಮಧ್ಯದಲ್ಲಿ, ಮನುಷ್ಯ ಹೋಗುವುದಕ್ಕು ಸಹ ಇಕ್ಕಟ್ಟಾಗಿರುವ ಸ್ವಲ್ಪ ಸಂದಿ ಕಾಣಿಸಿತು. ಆ ಸಂದಿನೊಳಗಿಂದ ಶಬ್ದ ಬಂದಹಾಗೆ ಸತ್ಯಂರಾಜುಗೆ ಅರ್ಥವಾಯಿತು. ಎರಡು ಬಂಡೆಗಳ ಸಂಧಿನೊಳಗೆ ಬಲವಂತವಾಗಿ ನುಸುಳಿ ನೋಡಿದಾಗ ಬಲಗಡೆಗೆ ಸ್ವಲ್ಪ ತಿರುವು ತಿರುಗಿದ್ದಿತು. ಮೇಲೆ ಮಣ್ಣಿನ ಹೊದಿಕೆ ಇದ್ದು, ತಿರುವು ತಿರುಗಿದ ದಾರಿ ಮುಂದಕ್ಕಿದ್ದ ಹಾಗೆ ಸತ್ಯಂರಾಜುವಿಗೆ ಅರ್ಥವಾಯಿತು. ಸತ್ಯಂರಾಜು ಧೈರ್ಯದಿಂದ ಒಳಗೆ ಹೋದನು. ಸುಮಾರು ನಲವತ್ತು ಅಡಿಗಳ ದೂರ ಹೋದ ನಂತರ ದಾರಿ ಬಲಗಡೆಗೆ ತಿರುಗಿದೆ. ಅಲ್ಲಿ ಹತ್ತು ಅಡಿಗಳ ಉದ್ದ, ಅಷ್ಟೇ ಅಗಲ, ಒಂಭತ್ತು ಅಡಿಗಳು ಎತ್ತರವಿರುವ ಬಯಲು ಕಾಣಿಸಿತು. ಪಕ್ಕದಿಂದ ಚಿಕ್ಕ ರಂಧ್ರದ ಮುಖಾಂತರ ಬೆಳಕು ಸಹ ಬೀಳುತ್ತಿದೆ. ಆ ಬಯಲಿನ ಮಧ್ಯದಲ್ಲಿ ಒಬ್ಬ ವ್ಯಕ್ತಿ ಕುಳಿತಿರುವುದು ಸಹ ಕಾಣಿಸಿತು. ಆ ವ್ಯಕ್ತಿಯನ್ನು ನೋಡುತ್ತಲೆ ಸತ್ಯಂರಾಜುಗೆ ಸ್ವಲ್ಪ ಭಯವಾಯಿತು. ಸತ್ಯಂ ರಾಜುವಿನ ಭಯವನ್ನು ನೋಡಿದ ಆ ವ್ಯಕ್ತಿ, ನೀನು ಭಯಪಡಬೇಡ ನೀನು ಹುಡುಕುತ್ತಿರುವುದು ನನ್ನನ್ನೇ ಎಂದನು. ಆಗ ಸತ್ಯಂರಾಜನಿಗೆ ಭಯವಿಲ್ಲದೆ ಹೋಗಿ, ಯಾವುದೋ ನಿಧಿ ದೊರಕಿದಷ್ಟು ಸಂತೋಷವಾಯಿತು. ತಕ್ಷಣವೆ ಸತ್ಯಂ ಆತನ ಕಾಲುಗಳ ಮೇಲೆ ಬಿದ್ದು ನೀನು ಯಾರೋ ಮಹಾನುಭಾವನು, ನಿನಗೆ ಕಾಣಿಸದಿದ್ದರೂ

ಹೊರಗಿದ್ದ ನನ್ನನ್ನು ಕರೆದಿದ್ದೀರೆಂದರೆ ನೀವೇ ನನ್ನ ಗುರುಗಳು ಎಂದನು. ಅಲ್ಲಿರುವ ವ್ಯಕ್ತಿ ನೋಡುವುದಕ್ಕೆ ಉದ್ದನೆಯ ಜುಟ್ಟು, ಗಡ್ಡ ಬೆಳೆಸಿ ಒಬ್ಬ ಮಹರ್ಷಿಯ ಹಾಗೆ ಕಾಣಿಸುತ್ತಿದ್ದರೂ ತಾನು ಮುಸ್ಲಿಮ್ ಮತದಲ್ಲಿ ಹುಟ್ಟಿದವನೆಂದು, ಆದರೂ ಹಿಂದೂಮತದಲ್ಲಿನ ಜ್ಞಾನವನ್ನು ತಿಳಿದುಕೊಂಡು ಅದನ್ನೇ ಆಚರಿಸಿದವನೆಂದು, ಆದ್ದರಿಂದ ನನ್ನ ಹೆಸರು ಎರಡು ಮತಗಳಿಗೆ ಸಂಬಂಧಿಸಿದೆಯೆಂದು, ಮುಸ್ಲಿಮ್ ಮತಕ್ಕೆ ಗುರುತಾಗಿ ಸಾಯಬ್ ಎಂದು, ಹಿಂದೂಮತಕ್ಕೆ ಸಂಬಂಧಿಸಿದ ಗುರುತಾಗಿ ಬಾಬಾ ಎಂದು, ಎರಡು ಸೇರಿಸಿದರೆ "ಸಾಯಬ್ ಬಾಬಾ" ಎನ್ನುವ ಹೆಸರಿನಲ್ಲಿದ್ದೇನೆಂದು ಸತ್ಯಂಗೆ ಹೇಳಿದನು. ಅಷ್ಟೇ ಅಲ್ಲದೆ ಸಾಯಬ್‌ಬಾಬಾರವರು, ಹೀಗೆ ಮತ್ತೆ ಕೆಲವು ವಿಷಯಗಳು ಸಹ ಹೇಳಿದನು. ನಾನು ಇಲ್ಲಿಯೆ ಕೆಲವು ವರ್ಷಗಳು ಧ್ಯಾನ ಮಾಡಿದ್ದೇನೆ. ನನ್ನಲ್ಲಿ ಎಷ್ಟೋ ಶಕ್ತಿ ಏರ್ಪಟ್ಟಿದೆ. ಆದರೆ ಇಸ್ಲಾಮ್ ಖುರಾನ್‌ನಲ್ಲಿ ಹೇಳಿದಹಾಗೆ, ಸಾಮಾನ್ಯ ಮನುಷ್ಯರಿಗೆ ಸಹಾಯ ಮಾಡಬೇಕೆಂದುಕೊಂಡಿದ್ದೇನೆ. ಆದ್ದರಿಂದ ನಾನು ಇಲ್ಲಿಂದ ಹೋಗಬೇ ಕೆಂದುಕೊಂಡಿದ್ದೇನೆ. ಇಷ್ಟು ದಿನಗಳು ನಿನಗೋಸ್ಕರವೆ ಕಾದು ನೋಡಿದೆನು. ಈಗ ನೀನು ಬಂದಿದ್ದೀಯ. ನನ್ನಲ್ಲಿರುವ ಶಕ್ತಿಯಿಂದ ನಾನು ಮೋಕ್ಷಕ್ಕೆ ಹೋಗಬಹುದು. ಆದರೆ ನಾನು ಮೋಕ್ಷಕ್ಕೆ ಹೋಗದಿದ್ದರೂ ಫರವಾಗಿಲ್ಲ. ಆ ಶಕ್ತಿಯನ್ನು ಪ್ರಜೆಗಳಿಗೆ ಉಪಯೋಗ ಆಗುವಂತೆ ದೇವರನ್ನು ಬೇಡಿಕೊಂಡಿದ್ದೇನೆ. ದೇವರು ನನ್ನ ನಿಸ್ವಾರ್ಥ ಕೋರಿಕೆಯನ್ನು ಮನ್ನಿಸಿ ನನ್ನ ಕೋರಿಕೆ ನೆರವೇರುವಂತೆ ಆಶೀರ್ವಧಿಸಿದ್ದಾನೆ. ನೀನು ಸಹ ಭವಿಷ್ಯತ್ತು ಕಾಲದಲ್ಲಿ ಪ್ರಜೆಗಳಿಗೆ ಉಪಯೋಗ ಪಡುವುದಕ್ಕೆ ನನ್ನಿಂದ ನಿನಗೆ ಸ್ವಲ್ಪ ಶಕ್ತಿಯನ್ನು ಕೊಡುತ್ತಿದ್ದೇನೆ. ನೀನು ನನ್ನ ಶಕ್ತಿಯನ್ನು ಹೊಂದಿ ಈ ಊರಿನಲ್ಲಿಯೇ ಇರು. ನಾನು ಎಷ್ಟೋ ಕಾಲದಿಂದ ಇದ್ದ ಊರು ಪೆನುಕೊಂಡ. ಆದ್ದರಿಂದ ನೀನು ಪೆನುಕೊಂಡದಲ್ಲಿಯೆ ಇರು ಎಂದನು. ಆಗ ಸತ್ಯಂ, ಸಂತೋಷಪಡುತ್ತಾ ಈಗ ನನ್ನ ಜೀವನಕ್ಕೆ ಒಂದು ಆಧಾರ ಸಿಕ್ಕಿದೆ, ನೀವು ಹೇಗೆ ಹೇಳಿದರೆ ಹಾಗೆ ಕೇಳುತ್ತೇನೆ ಎಂದನು.

ಸಾಯಬ್ ಬಾಬಾರವರು ಸತ್ಯಂರಾಜುನೊಂದಿಗೆ ಇನ್ನೂ ಸ್ವಲ್ಪ ವಿಷಯ ಹೇಳಿದನು. ನೀನು ಹಿಂದೂ ಮತಸ್ಥನು. ನೀನು ನನ್ನ ಶಿಷ್ಯನಾದ ನಂತರ ನಿನಗೆ ಈ ಮತದ ಹೆಸರು ಇರಬಾರದು. ಆದ್ದರಿಂದ ನಾನು ಎರಡು ಮತಗಳಿಗೆ ಸಂಬಂಧಿಸಿದ ಹೆಸರು ಇಟ್ಟುಕೊಂಡಹಾಗೆ, ನೀನು ಸಹ ಎರಡು ಮತಗಳಿಗೆ ಸಂಬಂಧಿಸಿದ ಹೆಸರಿನಿಂದ ಚಲಾವಣೆ ಆಗಬೇಕು. ನಾನು ಮೊದಲು ಇಸ್ಲಾಮ್ ಮತದವನು. ನಂತರ, ಹಿಂದೂ ಜ್ಞಾನವನ್ನು ತಿಳಿದುಕೊಂಡು ಅನುಸರಿಸಿ ದ್ದೇನಾದ್ದರಿಂದ ಮೊದಲು ಮುಸ್ಲಿಮ್ ಪದ "ಸಾಯಬ್" ನಂತರ, ಹಿಂದೂ ಪದ "ಬಾಬಾ" ಎಂದು ಪೂರ್ತಿಯಾಗಿ ಸಾಯಬ್‌ಬಾಬಾ ಎಂದು ಹೆಸರು ಇಟ್ಟುಕೊಂಡಹಾಗೆ, ನೀನು ಹಿಂದೂ ಮತದಲ್ಲಿ ಹುಟ್ಟಿರುವುದಾದ್ದರಿಂದ ಮೊದಲು ಹಿಂದೂ ಮತಕ್ಕೆ ಸಂಬಂಧಿಸಿದ ಹೆಸರು 'ಬಾಬಾ' ಎಂದು, ನಂತರ ಇಸ್ಲಾಮ್ ಜ್ಞಾನದ ಪ್ರಕಾರ ನಡೆದುಕೊಳ್ಳುತ್ತೀಯ ಆದ್ದರಿಂದ ಹಿಂದೆ ಮುಸ್ಲಿಮ್ ಹೆಸರು 'ಫಕರುದ್ದೀನ್' ಎಂದು ಎರಡೂ ಸೇರಿಸಿ 'ಬಾಬಾ ಫಕರುದ್ದೀನ್' ಅನ್ನುವ ಹೆಸರಿನಿಂದ ಚಲಾವಣೆ ಆಗಬೇಕು. ನಾನು ಮುಸ್ಲಿಂ ಹಿಂದೂ ಆಗಿರುವುದರಿಂದ "ಸಾಯಬ್‌ಬಾಬಾ", ನೀನು ಹಿಂದೂ ಮುಸ್ಲಿಮ್ ಆದ್ದರಿಂದ "ಬಾಬಾ ಫಕರುದ್ದೀನ್" ನಂತರ, ಈಗಿನಿಂದ ನೀನು ಮುಸ್ಲಿಮ್ ಮತಸ್ಥನಾಗಿಯೇ ಕಾಣಿಸಬೇಕು. ನಾನು ಮುಸ್ಲಿಮ್ ಮತದಲ್ಲಿ ಹುಟ್ಟಿದರೂ, ಹಿಂದೂ ಮಹರ್ಷಿಯಂತೆ ಕಾಣಿಸುತ್ತಿದ್ದೇನೆ. ಹಾಗೆ ನೀನು ಹಿಂದೂ ಮತದಲ್ಲಿ ಹುಟ್ಟಿದರೂ ಇಸ್ಲಾಮ್ ಪಂಡಿತನಾಗಿ ಕಾಣಿಸಬೇಕು. ಹಾಗೆ ಇದ್ದರೇನೆ ನಿನಗೆ ನನ್ನ ಶಕ್ತಿ ಉಪಯೋಗಪಡುತ್ತದೆ. ಅಷ್ಟೇ ಅಲ್ಲ ನೀನು ಈ ಊರಿನಲ್ಲಿ ಎಲ್ಲಿ ಇರಬೇಕೆಂದು ದೇವರೇ ನಿರ್ಣಯಿಸುತ್ತಾನೆ. ಅದಕ್ಕೆ ನೀನು ಒಂದು ಕೆಲಸ ಮಾಡಬೇಕು. ಅದೇನೆಂದರೆ! ನಾನು ಒಂದು ಕಡ್ಡಿಯನ್ನು ಕೊಡುತ್ತೇನೆ. ಆ ಕಡ್ಡಿಯನ್ನು ತೆಗೆದುಕೊಂಡು ನೀನು ರಾತ್ರಿಹೊತ್ತು ಮಲಗುವಾಗ, ತಲೆ ಪಕ್ಕ ಭೂಮಿಯಲ್ಲಿ ಒಂದು ಕೊನೆಯನ್ನು ಊತಿಟ್ಟು ಮಲಗು. ಬೆಳಗಾದ ನಂತರ ಅದು ಮೇಲಿನ ಕೊನೆ ಚಿಗುರಿದ್ದರೆ ಅದೇ ನಿನ್ನ ನಿವಾಸಸ್ಥಳವೆಂದು ತಿಳಿದುಕೊ! ನಾನು ಕೊಟ್ಟ ಕಡ್ಡಿ ಚಿಗುರುವವರೆಗು ಈ ಊರಿನಲ್ಲಿ ಬೇರೆ ಬೇರೆ ಜಾಗಗಳಲ್ಲಿ ಮಲಗಿಕೊಂಡು

ನೋಡು. ತಪ್ಪದೆ ಯಾವುದೊ ಒಂದು ಸ್ಥಳ ನಿನಗೆ ದೊರಕುತ್ತದೆಂದು ಹೇಳಿ, ಸಾಯಬ್ ಬಾಬಾ ತಾನು ಹಲ್ಲು ಉಜ್ಜಿಕೊಳ್ಳುವ ಮಿಸ್ವಾಕ್ ಗಿಡದ ಕಡ್ಡಿಯನ್ನು ಕೊಟ್ಟನು. ಮಿಸ್ವಾಕ್ ಗಿಡವನ್ನು ಕೆಲವು ಪ್ರಾಂತಗಳಲ್ಲಿ ಸಕ್ಕರೆ ಗಿಡ ಎಂದು ಕರೆಯುತ್ತಾರೆ.

ಹಾಗೆ ಕಡ್ಡಿಯನ್ನು ಕೊಟ್ಟ ಸಾಯಬ್ ಬಾಬಾರವರು, ಸತ್ಯಂರಾಜುಗೆ ಮುಸ್ಲಿಮ್‌ರಲ್ಲಿ ಸನ್ಯಾಸಿಯಾಗಿ ಚಲಾವಣೆ ಆಗಬೇಕೆಂದು, ಕ್ರಮ ತಪ್ಪದೆ ನಮಾಜ್ ಮಾಡಿಕೊಳ್ಳಬೇಕೆಂದು, ದೇವರ ಮೇಲೆ ವಿಶ್ವಾಸ ಬೆಳೆಸಿಕೊಳ್ಳಬೇಕೆಂದು, ಇಸ್ಲಾಮ್‌ಗೆ ಸಂಬಂಧಿಸಿದ ಜ್ಞಾನವನ್ನು ಹೇಳಿ ಇನ್ನು ಹೋಗೆಂದು ಕಳುಹಿಸಿದನು. ಅಷ್ಟೇ ಅಲ್ಲದೆ "ನೀನು ಎಂದಿಗೂ ಇಲ್ಲಿಗೆ ಬರಬೇಡ. ಇಲ್ಲಿ ನಾನಿರುವುದಿಲ್ಲ. ಇಲ್ಲಿಂದ ಹೊರಟು ಹೋಗುತ್ತೇನೆ" ಎಂದು ಸಹ ಹೇಳಿದನು. ಸಾಯಬ್ ಬಾಬಾ ಹತ್ತಿರ ಆಶೀರ್ವಾದ ಪಡೆದ ಸತ್ಯಮ್‌ರಾಜು ಹೊರಗಡೆ ಬಂದು ಪೆನುಕೊಂಡದಲ್ಲಿ ಅಲೆಯುತ್ತಾ, ಪ್ರತಿ ರಾತ್ರಿ ಎಲ್ಲಿ ಮಲಗಿಕೊಂಡರೆ ಅಲ್ಲಿ ಬಾಬಾರವರು ಕೊಟ್ಟ ಕಡ್ಡಿಯನ್ನು ಸ್ವಲ್ಪ ಊತಿಟ್ಟು ಮಲಗುತ್ತಿದ್ದನು. ಆ ವಿಧವಾಗಿ ಕೆಲವು ದಿನಗಳು ಕಳೆದವು. ಒಂದು ದಿನ ಪೆನುಕೊಂಡದಲ್ಲಿರುವ ಈಶ್ವರ ಆಲಯದಲ್ಲಿ ಸತ್ಯಂರಾಜು ಮಲಗಿಕೊಂಡನು. ಬೆಳಗಾಗಿ ನೋಡುವಷ್ಟರಲ್ಲಿ ತಲೆ ಭಾಗದಲ್ಲಿ ಊತಿಟ್ಟ ಮಿಸ್ವಾಕ್ ಕಡ್ಡಿ ಚಿಗುರಿದಂತೆ ಕಂಡಾಗ, ಆ ದಿನದಿಂದ ಸತ್ಯಂರಾಜು ಅಲ್ಲಿಯೆ ಮಲಗಲು ಪ್ರಾರಂಭಿಸಿದನು. ಈತನೊಂದಿಗೆ ಕೆಲವರು ಸಾಧುಗಳು ಊರಿನಲ್ಲಿ ಬಿಕ್ಷಾಟನೆ ಮಾಡಿಕೊಂಡು ಬಂದು, ರಾತ್ರಿ ಹೊತ್ತು ಆಲಯದಲ್ಲಿ ಮಲಗುತ್ತಿದ್ದರು. ಹಾಗೆ ಮಲಗುವ ಸಾಧುಗಳು ಐದಾರು ದಿನಗಳಿಗಿಂತ ಹೆಚ್ಚಾಗಿ ಇರುತ್ತಿರಲಿಲ್ಲ. ಸತ್ಯಂರಾಜು ಮಾತ್ರ ಎಲ್ಲಿಗೂ ಹೋಗದೆ ಆ ಶಿವಾಲಯದಲ್ಲಿಯೆ ನಿಂತು ಹೋದನು.

**ನಾನು** :– ನೀನು ಹೇಳುತ್ತಿರುವ ವಿಷಯವೆಲ್ಲಾ ಚೆನ್ನಾಗಿಯೆ ಇದೆ. ಆದರೆ ಚಿಕ್ಕ ಸಂಶಯ ಇದೆ ಕೇಳಂತೀಯಾ?

**ಆಕೆ** :– ಕೇಳಿರಿ ಸ್ವಾಮಿ! ನಿಮಗೆ ಹೇಳದೆ ಹೋದರೆ ಇನ್ಯಾರಿಗೆ ಹೇಳಬೇಕು. ಏನು ಆ ಸಂಶಯ?

**ನಾನು** :– ಸತ್ಯಂರಾಜು ಗುಹೆಯೊಳಗೆ ಹೋದಾಗ, ಅಲ್ಲಿ ಒಬ್ಬ ಸಾಯಬ್ ಬಾಬಾರವರು ಮಾತ್ರ ಇದ್ದಾರೆ. ನೀವು ಹೇಳಿದಹಾಗೆ ಸತ್ಯಂ ಮತ್ತು ಬಾಬಾರವರು ಅಲ್ಲದೆ ಬೇರೆ ಯಾರು ಇಲ್ಲ. ಅಲ್ಲಿ ಅವರ ಮಧ್ಯೆ ನಡೆದ ವಿಷಯ ಏನಿದೆಯೊ ಅದನ್ನು ಇತ್ತ ಸತ್ಯಂ ಆಗಲಿ ಅತ್ತ ಬಾಬಾ ಆಗಲಿ ಹೇಳಿದರೇನೆ ಹೊರಗಿನವರಿಗೆ ಗೊತ್ತಾಗುತ್ತದೆ. ಅವರು ಯಾರಿಗು ಹೇಳದೇ ಇದ್ದರೆ ಯಾರಿಗು ಗೊತ್ತಾಗುವುದಿಲ್ಲ. ಆಗಿರುವಾಗ ಅಲ್ಲಿ ನಡೆದ ವಿಷಯವೆಲ್ಲಾ ಮಣಿಪೋಣಿಸಿದ ಹಾಗೆ ನೀವು ಹೇಗೆ ಹೇಳುತ್ತಿದ್ದೀರಾ?

**ಆಕೆ** :– ಕ್ಷಮಿಸಿರಿ, ನಾನು ಮೊದಲೆ ಹೇಳಬೇಕಾದ ವಿಷಯವಿದೆ ಆದರೆ ಹೇಳಲಿಲ್ಲ. ನಾನು ಸತ್ಯಂ ರಾಜುಗೆ ಸ್ವಂತ ತಂಗಿಯಾಗುತ್ತೇನೆ. ನನ್ನ ಹೆಸರು ಅಂಬೋಜಮ್ಮ. ನಮ್ಮ ಅಣ್ಣ ಸತ್ಯಂ ಮನೆ ಬಿಟ್ಟು ಬರುವುದಕ್ಕಿಂತ ಮೊದಲೆ ನಾನು ಸತ್ತುಹೋಗಿದ್ದೆನು. ಆದರೆ ಜನ್ಮಕ್ಕೆ ಹೋಗಲಿಲ್ಲ. ನಾನು ಆಗಿನಿಂದ ಇದ್ದೇನೆ, ಆದರೆ ಯಾರಿಗು ಕಾಣಿಸೆನು. ನಮ್ಮ ಅಣ್ಣ ಮನೆ ಬಿಟ್ಟು ಬರುವಾಗ ನಾನು ಸಹ ಅಣ್ಣನ ಜೊತೆಗೆ ಬಂದೆನು. ನಾನು ಕಾಣಿಸದೆ ಇದ್ದರೂ, ಅಣ್ಣ ಸತ್ಯಂಗೆ ಎಂತಹ ಹಾನಿ ಆಗದ ಹಾಗೆ ನೋಡಿಕೊಳ್ಳುತ್ತಿದ್ದೆನು. ಆ ವಿಧವಾಗಿ ಸತ್ಯಂ ಅಣ್ಣನನ್ನು ಹಿಂಬಾಲಿಸಿ ನಾನು ಸಹ ಗುಹೆಯೊಳಗೆ ಹೋಗಿ, ಒಂದು ಪಕ್ಕದಲ್ಲಿದ್ದು ಎಲ್ಲ ಕೇಳುವುದು, ಎಲ್ಲವನ್ನು ನೋಡುವುದು ನಡೆದಿದೆ. ಆದ್ದರಿಂದ ನಿಮಗೆ ಮಣಿಪೋಣಿಸಿದ ಹಾಗೆ ಹೇಳುತ್ತಿದ್ದೇನೆ.

**ನಾನು** :– ಸರಿ! ಈಗ ಸಂಶಯ ತೀರಿತು. ಮತ್ತೊಂದು ಸಂಶಯ ಹುಟ್ಟಿತು. ಅದನ್ನು ಕೇಳುತ್ತಿದ್ದೇನೆ. ನೀವು ಹೇಳಿರುವುದು ಸುಮಾರು ಐದು (500) ನೂರು ಸಂವತ್ಸರಗಳ ಕೆಳಗಿನ ವಿಷಯ. ಅಂದಿನಿಂದ ನೀವು ಸಜೀವವಾಗಿಯೆ ಇದ್ದೀರಾ?

**ಆಕೆ** :– ಹೌದು. ನಾನು ಸೂಕ್ಷ್ಮವಾಗಿ ಆಗ ಇರುವಹಾಗೆ ಈಗಲೂ ಇದ್ದೇನೆ. ಹಾಗೆ ಸತ್ಯಂ ಸ್ವಲ್ಪಕಾಲಕ್ಕೆ ಸತ್ತುಹೋಗಿ, ಆತನು ಸಹ ನನ್ನ ಹಾಗೆ ಸೂಕ್ಷ್ಮವಾಗಿ ಬದಲಾಗಿ ಸಜೀವವಾಗಿಯೆ ಇದ್ದಾನೆ. ಇಬ್ಬರು ಸೇರಿ ದರ್ಗಾದ ಹತ್ತಿರವೆ

ಇದ್ದೇವೆ. ನಮಗೆ ಸಾವು ಯಾವಾಗ ಬರುತ್ತದೊ ಗೊತ್ತಿಲ್ಲ. ಹೀಗೆ ಇನ್ನೂ ಎಷ್ಟುಕಾಲ ಇರಬೇಕೊ ತಿಳಿದಿಲ್ಲ.

**ನಾನು** :– ಆದರೆ ನೀವಿಬ್ಬರು ಸ್ಥೂಲಶರೀರವನ್ನು ಬಿಟ್ಟು ಸೂಕ್ಷ್ಮ ಶರೀರದೊಂದಿಗೆ ಇದ್ದೀರೆಂಬ ಮಾತು.

**ಆಕೆ** :– ಹೌದು ಹಾಗೇ ಇದ್ದೇವೆ.

**ನಾನು** :– ಸತ್ಯಂರಾಜುರವರು, ಶಿವಾಲಯದಲ್ಲಿ ನಿಂತುಹೋಗಿದ್ದಾನಲ್ಲ! ಅಲ್ಲಿ ಎಷ್ಟುಕಾಲವಿದ್ದಾನೆ? ನಂತರ ನಡೆದ ವಿಷಯವನ್ನು ನೀನೆ ಹೇಳಬೇಕು.

**ಆಕೆ** :– ಸತ್ಯಂರಾಜುವಿನ ಗುರುಗಳಾದ ಸಾಯಬ್ ಬಾಬಾರವರು ಹೇಳಿದಹಾಗೆ ಕಡ್ಡಿ ಚಿಗುರಿದೆ, ಆದ್ದರಿಂದ ಸತ್ಯಂ ಶಾಶ್ವತವಾಗಿ ಅಲ್ಲಿಯೆ ಇರಬೇಕು. ಅದೇ ವಿಧವಾಗಿ ಮೂರು ನಾಲ್ಕು ತಿಂಗಳುಗಳು ಕಳೆದಿವೆ. ಪ್ರತಿದಿನ ಬೆಳಗ್ಗೆ, ಸಾಯಂಕಾಲ ಸತ್ಯಂನನ್ನು ಗಮನಿಸಿದ ಪೂಜಾರಿ, ಶಾಶ್ವತವಾಗಿ ಅಲ್ಲಿಯೆ ಇರಬಾರದು, ಆಗಾಗ ಬಂದು ಇರಬಹುದೆಂದನು. ಆ ಪೂಜಾರಿ ಮಾತನ್ನು ಸತ್ಯಂ ಕೇಳಲಿಲ್ಲ. ಒಂದು ದಿನ ಪೂಜಾರಿ ಬಂದು, ನಿನ್ನ ಹೆಸರೇನು ಎಂದು ಕೇಳಿದನು. ಆಗ ಸತ್ಯಂ ನನ್ನ ಹೆಸರು ಸತ್ಯಂರಾಜು ಎಂದು ಹೇಳದೆ, ಬಾಬಾ ಫಕರುದ್ದೀನ್ ಎಂದನು. ಆ ಮಾತು ಕೇಳುತ್ತಲೆ ಪೂಜಾರಿಗೆ ಮತ್ತಷ್ಟು ಕೋಪ ಬಂದಿತು. ಈ ಗುಡಿಯೊಳಗೆ ಸಾಧುಗಳು, ಸನ್ಯಾಸಿಗಳು ಬರಬಹುದು, ಹೋಗಬಹುದು ಆದರೆ ನೀನು ಒಬ್ಬ ಮುಸ್ಲಿಮ್ ಫಕೀರನು! ಒಳಗೆ ಬರಬಾರದು ಎಂದು ಪೂಜಾರಿ ಅಂದಾಗ ಅದಕ್ಕೆ ಬಾಬಾ ಫಕರುದ್ದೀನ್ (ಸತ್ಯಮ್) ಇದು ನಮ್ಮ ಗುರುಗಳ ಆಜ್ಞೆ ಪ್ರಕಾರ ಇದು ನನ್ನ ಸ್ವಂತ ಸ್ಥಾನ. ಇಲ್ಲಿಂದ ನಾನು ಹೊರಗೆ ಹೋಗುವುದಿಲ್ಲ ಎಂದನು. ಈ ವಿಧವಾಗಿ ಪೂಜಾರಿ ಗುಡಿ ನನ್ನದು ನೀನು ಹೊರಗೆ ಹೋಗು! ಎಂದು ಅನ್ನುತ್ತಾನೆ, ಬಾಬಯ್ಯ ಈ ಸ್ಥಾನ ನನ್ನದು ಹೋಗುವುದಿಲ್ಲ ಎನ್ನುತ್ತಾನೆ. ಹಾಗೆ ಸ್ವಲ್ಪ ಕಾಲ ಕಳೆಯಿತು. ಗುಡಿಗೆ ಬಂದವರು ಅನಾರೋಗ್ಯಗಳನ್ನು ಬಾಬಯ್ಯನಿಗೆ ಹೇಳಿದರೆ, ಆತನು ತನ್ನ ಗುರುಗಳು ಕೊಟ್ಟ

ಶಕ್ತಿಯಿಂದ ಗುಣಪಡಿಸಿ ಕಳುಹಿಸುತ್ತಿದ್ದನು. ಆ ವಿಧವಾಗಿ ಗುಡಿಯಲ್ಲಿ ಬಾಬಾರ ವರಿಗೆ ಸ್ವಲ್ಪ ಜನಬಳಕೆ ಬೆಳೆಯಿತು.

ಈಶ್ವರಾಲಯದೊಳಗಿನ ಪೂಜಾರಿಗೆ, ಬಾಬಾ ಪಕರುದ್ದಿನ್ (ಸತ್ಯಮ್ ರಾಜು) ಪಕ್ಕದಲ್ಲಿ ಶೂಲದಂತೆ ತಯಾರಾದನು. ಒಂದು ದಿನ ಪೂಜಾರಿ, ಬಾಬಾನನ್ನು ಮೋಸದಿಂದಲಾದರು ಸಾಯಿಸಬೇಕೆಂದು ಅಂದುಕೊಂಡನು. ಹಾಗೆ ಅಂದುಕೊಂಡ ನಂತರ ಒಂದು ದಿನ ವಿಷವನ್ನು ಬೆರೆಸಿ ಗಾರಿಗೆಗಳನ್ನು ತಯಾರು ಮಾಡಿ, ಇತರರಿಂದ ಬಾಬಾರವರಿಗೆ ಸೇರುವಂತೆ ಮಾಡಿದನು. ರಾತ್ರಿಗೆ ತಿಂದು, ಬೆಳಗ್ಗೆ ಸತ್ತುಹೋಗಬೇಕೆಂಬ ಉದ್ದೇಶದಿಂದ ಸಾಯಂಕಾಲ ಗಾರಿಗೆಗಳನ್ನು ಬಾಬಾರವರಿಗೆ ಕೊಡುವಂತೆ ಮಾಡಿದನು. ಯಾರು ಏನು ಕೊಟ್ಟರು ಬಾಬಾರವರು ತಿನ್ನುತ್ತಿದ್ದರು. ಆದ್ದರಿಂದ ಸುಲಭವಾಗಿ ಪಥಕ ನೆರವೇರುತ್ತದೆಂದು ಪೂಜಾರಿ ಅಂದುಕೊಂಡನು. ಆದರೆ ಆ ದಿನ ಬಾಬಾ ಪಕರುದ್ದೀನ್ ತಾನು ತೆಗೆದುಕೊಂಡ ಗಾರಿಗೆಗಳನ್ನು ಪಕ್ಕದಲ್ಲಿಟ್ಟು ಮಲಗಿ ಕೊಂಡನು. ಆ ದಿನ ನಡುರಾತ್ರಿ ಸಮಯದಲ್ಲಿ ಪೂಜಾರಿಗೆ ಹೊಟ್ಟೆನೋವು ಬಂದಿತು. ಆ ರಾತ್ರಿಯೆಲ್ಲಾ ಪೂಜಾರಿ ವಿಪರೀತವಾಗಿ ನೋವು ಅನುಭವಿಸಿದನು. ಬೆಳಗ್ಗೆ ಬಂದು ನೋಡಿದರೆ, ಬಾಬಾರವರಿಗೆ ಏನು ಆಗಿರಲಿಲ್ಲ. ಪೂಜಾರಿಗೆ ಆಶ್ಚರ್ಯವಾಯಿತು. ರೋಗಗ್ರಸ್ತರಿಗೆ ಬಾಬಾ ಮಂತ್ರ ಓದಿಯೋ, ಏನಾದರು ಔಷಧ ಕೊಟ್ಟೋ ಚೆನ್ನಾಗಿ ಮಾಡುವನು. ಆದ್ದರಿಂದ ಪೂಜಾರಿ ಸಹ ಬಾಬಯ್ಯ ಹತ್ತಿರಕ್ಕೆ ಹೋಗಿ ಹೊಟ್ಟೆನೋವು ಹೋಗುವುದಕ್ಕೆ ಔಷಧ ಕೊಡು ಎಂದನು. ಆಗ ಬಾಬಾ ತನ್ನ ಹತ್ತಿರ ಪಕ್ಕದಲ್ಲಿ ಇಟ್ಟುಕೊಂಡ ಗಾರಿಗೆಗಳನ್ನು ಕೊಟ್ಟನು. ಇವು ತಿಂದರೆ ಹೊಟ್ಟೆನೋವು ಹೋಗುತ್ತದೆಂದು ಹೇಳಿದನು. ಅವುಗಳನ್ನು ನೋಡುತ್ತಲೆ ಪೂಜಾರಿಗೆ ವಿಷ ಜ್ಞಾಪಕಕ್ಕೆ ಬಂದಿತು. ಗಾರಿಗೆಗಳನ್ನು ಕೈಯಲ್ಲಿ ತೆಗೆದುಕೊಂಡು ತಿನ್ನದೆ ಇಟ್ಟುಕೊಳ್ಳುವುದನ್ನು ನೋಡಿದ ಬಾಬಾ ಅವುಗಳನ್ನು ತಿನ್ನು, ನೀನು ಏನು ಭಯಪಡಬೇಡ. ಅವುಗಳಲ್ಲಿನ ವಿಷವೇ ನಿನ್ನ ಹೊಟ್ಟೆನೋವನ್ನು ಇಲ್ಲದೆ ಮಾಡುತ್ತದೆಂದು ಹೇಳಿದನು. ಪೂಜಾರಿಗೆ ಏನು

ಅರ್ಥವಾಗಲಿಲ್ಲ. ಇವುಗಳಲ್ಲಿ ವಿಷ ಇದೆಯೆಂದು ಆತನಿಗೇಗೆ ತಿಳಿಯಿತು? ಈಗ ಇವು ತಿಂದರೆ ನಾನು ಸಾಯುತ್ತೇನೆ, ತಿನ್ನದೆ ಹೋದರೂ ನೋವಿಗೆ ಸಹಿಸಿಕೊಳ್ಳದೆ ಸಾಯುತ್ತೇನೆ. ನೋವನ್ನು ಅನುಭವಿಸಿ ಸಾಯುವುದಕ್ಕಿಂತ ಇವುಗಳನ್ನು ತಿಂದು ಬೇಗ ಸಾಯುವುದು ಮೇಲೆಂದುಕೊಂಡು ಗಾರಿಗೆಗಳನ್ನು ತಿಂದನು. ತಿಂದ ತಕ್ಷಣವೆ ಬಾಬಾರವರು ಹೇಳಿದಹಾಗೆ ಹೊಟ್ಟೆನೋವು ಮಾಯವಾಗಿ ಹೋಯಿತು. ಅಲ್ಲಿಂದ ಪೂಜಾರಿ ತಲೆಬಗ್ಗಿಸಿಕೊಂಡು ಹೋದನು.

ಮತ್ತೆ ಕೆಲವು ದಿನಗಳಿಗೆ ಪೂಜಾರಿಗೆ ಬಾಬಾ ಮೇಲೆ ದ್ವೇಷ ಬೆಳೆದು ಹೋಯಿತು. ಈ ಬಾರಿ ನೇರವಾಗಿ ಕೋಟೆಯೊಳಗೆ ಹೋಗಿ, ರಾಜನಿಗೆ ಹೇಳಿ ಬಾಬಾಪಕರುದ್ದೀನ್ ವಿಷಯ ಹೇಳಿ, ಗುಡಿಯಿಂದ ರಾಜರ ಕೈಯಿಂದ ಹೊರಹಾಕಿಸಬೇಕೆಂದುಕೊಂಡನು. ಹಾಗೆ ಅಂದುಕೊಂಡ ನಂತರ ಒಂದು ದಿನ ಕೋಟೆಯೊಳಗಿನ ರಾಜರ ಹತ್ತಿರಕ್ಕೆ ಹೋಗಿ ಒಬ್ಬ ಫಕೀರ ಗುಡಿಯನ್ನು ಆಕ್ರಮಿಸಿಕೊಂಡು, ಅಪವಿತ್ರತೆ ಮಾಡುತ್ತಿದ್ದಾನೆಂದು ಹೇಳಿದನು. ರಾಜ, ಭಟರಿಗೆ ಬಾಬಾಪಕರುದ್ದೀನ್‌ನನ್ನು ಕರೆಯಲು ಕಳುಹಿಸಿದನು. ಇಬ್ಬರ ವಾದಗಳನ್ನು ಕೇಳಿದನು. ದೇವಾಲಯ ಭಕ್ತರದೆ ಹೊರತು ಪೂಜಾರಿಯದಲ್ಲ ಎಂದು ಬಾಬಾ ಎನ್ನುತ್ತಿದ್ದಾನೆ. ಆಲಯ ಪೂಜಾರಿದೆ ಹೊರತು ಭಕ್ತರದಲ್ಲ ಎಂದು ಪೂಜಾರಿ ಎನ್ನುತ್ತಿದ್ದಾನೆ. ಕೊನೆಗೆ ರಾಜ ಯಾವಕಡೆಯೂ ಹೇಳಲಾಗದೆ ಇಬ್ಬರಿಗು ಸೇರಿಸಿ ಒಂದು ಪರೀಕ್ಷೆ ಇಟ್ಟನು. ಆ ಪರೀಕ್ಷೆಯಲ್ಲಿ ಯಾರು ಗೆದ್ದರೆ ಅವರಿಗೆ ಗುಡಿ ಸ್ವಂತವಾಗುತ್ತದೆಂದು ಹೇಳಿದನು. ಆ ಪರೀಕ್ಷೆಗೆ ಇಬ್ಬರೂ ಒಪ್ಪಿಕೊಂಡರು. ಆ ಪರೀಕ್ಷೆ ಏನೆಂದರೆ! ಒಂದೊಂದು ಸುಣ್ಣದ ಮೂಟೆಯಲ್ಲಿ ಒಬ್ಬೊಬ್ಬರನ್ನು ಸುಣ್ಣದೊಂದಿಗೆ ಸಹ ಇರಿಸಿ, ಮೂಟೆಕಟ್ಟಿ, ಪೆನುಕೊಂಡ ಕೆರೆಯಲ್ಲಿ ಹಾಕಿದರೆ, ಯಾರು ಮೊದಲು ಮೂಟೆಯನ್ನು ಬಿಚ್ಚಿಕೊಂಡು ಹೊರಬಿದ್ದರೆ ಅವರಿಗೇ ಗುಡಿಯನ್ನು ಕೊಡಲಾಗುತ್ತದೆ. ರಾಜ ಹೇಳಿದ ಪ್ರಕಾರ ಸುಣ್ಣದೊಂದಿಗೆ ಸಹ ಇಬ್ಬರನ್ನು ಮೂಟೆಗಳಂತೆ ಕಟ್ಟಿ ನಡುಕೆರೆಯಲ್ಲಿ ಹಾಕಿದರು. ಇದೆಲ್ಲಾ ರಾಜನ ಸಮಕ್ಷಮದಲ್ಲಿಯೇ ನಡೆದಿದೆ. ಮಧ್ಯಾಹ್ನ ಒಂದು ಗಂಟೆಯ ಸಮಯದಲ್ಲಿ

ನೀರಿನಲ್ಲಿ ಹಾಕಿದಾಗ, ಐದು ನಿಮಿಷಗಳಲ್ಲಿ ಬಾಬಾದಡಕ್ಕೆ ಸೇರಿಕೊಂಡನು. ಪೂಜಾರಿ ಸುಣ್ಣದಲ್ಲಿ ಬೆಂದು ಹೋಗಿ ಸತ್ತುಹೋದನು. ಬಾಬಾರವರು ದಡಕ್ಕೆ ಸೇರಿದ ತಕ್ಷಣವೇ ಕೆರೆ ಕಟ್ಟೆಯ ಮೇಲೆ ನಮಾಜ್‌ಮಾಡಿ, ರಾಜನ ಹತ್ತಿರ ಅನುಮತಿ ತೆಗೆದುಕೊಂಡು ಹೊರಟು ಹೋದನು. ಆ ವಿಧವಾಗಿ ಶಿವಾಲಯ ಬಾಬಾ ಪಕುರುದ್ದೀನ್ ಸ್ವಂತವಾಯಿತು. ಆಗಿನಿಂದ ಶಿವಭಕ್ತರು ಬಂದು, ಪೂಜೆ ಮಾಡಿಕೊಂಡು ಬಾಬಾ ಹತ್ತಿರ ತಮ್ಮ ಕಷ್ಟಗಳನ್ನು ಹೇಳಿಕೊಂಡು ಹೋಗುತ್ತಿದ್ದರು. ಬಾಬಾ ಹತ್ತಿರ ಕಷ್ಟಗಳನ್ನು ಹೇಳಿಕೊಂಡರೆ ಪರಿಹಾರವಾಗುತ್ತವೆಂದು ನಂಬುತ್ತಿದ್ದರು. ಬಹಳ ಜನರಿಗೆ ಹಾಗೆ ನಡೆಯುವುದರಿಂದ, ಅಲ್ಲಿಗೆ ಬರುವವರ ಸಂಖ್ಯೆ ಬೆಳೆದು ಹೋಯಿತು. ಆ ವಿಧವಾಗಿ ಬಾಬಾಗೆ, ಪ್ರಜೆಗಳಿಗೆ ಸಂಬಂಧ ಬೆಳೆದು ಹೋಯಿತು. ಸ್ವಲ್ಪಕಾಲ ಕಳೆದಾಗ ಬಾಬಾಗೆ ವೃದ್ಧಾಪ್ಯ ಬಂದು ಕೊನೆಗೆ ಸತ್ತು ಹೋದನು. ಸತ್ತುಹೋದ ನಂತರ ಸೂಕ್ಷ್ಮ ಶರೀರದೊಂದಿಗೆ ಅಲ್ಲಿಯೇ ಇದ್ದಾನೆ.

ಬಾಬಾರವರು ಸತ್ತುಹೋದ ನಂತರ ಅಲ್ಲಿಯವರೆಗು ಆತನೊಂದಿಗೆ ಪರಿಚಯವೇರ್ಪಡಿಸಿಕೊಂಡ ಮುಸ್ಲಿಮ್ ಭಕ್ತರು, ಬಾಬಾ ಸಾಯದ ಮೊದಲೇ ತಮ್ಮೊಂದಿಗೆ ಹೇಳಿದ ಪ್ರಕಾರ ಆತನ ಶರೀರವನ್ನು ಗುಡಿಯೊಳಗೆ ಊತಿಟ್ಟು ದರ್ಗಾ ಕಟ್ಟಿದ್ದಾರೆ. (ಇಂದಿಗೂ ದರ್ಗಾ ಇದೆ ಶಿವಾಲಯ ಇದೆ. ಪ್ರಸ್ತುತ ಕಾಲದಲ್ಲಿ ಹಳುಬರಿಗೆ, ಆ ಊರಿನವರಿಗೆ ಅದು “ಶಿವಾಲಯ” ಎಂದು ತಿಳಿದಿದೆ ಹೊರತು ಹೊಸಬರಿಗೆ ಬಾಬಾ ಫಕರುದ್ದೀನ್ “ದರ್ಗಾ” ಎಂದೇ ತಿಳಿದಿದೆ. ಅಲ್ಲಿ ಪ್ರತಿ ವರ್ಷ ಬಾಬಾರವರ ಉರುಸು ನಡೆಯುತ್ತಿದೆ. ಆ ಉರುಸು ಪ್ರತ್ಯೇಕತೆ ಏನೆಂದರೆ ಬಾಬಾರವರು ಮೊದಲು ಕಡ್ಡಿ ನೆಟ್ಟಾಗ ಚಿಗುರಿದ ಮಿಸ್ವಾಕ್ ಗಿಡ (ಸಕ್ಕರೆ ಮರ) ದಿಂದ ಉರುಸು ದಿನದಂದು ಸಕ್ಕರೆ ಬೀಳುತ್ತಿರುತ್ತದಂತೆ. ಆ ಸಕ್ಕರೆಯನ್ನು ಬಾಬಾರವರಿಗೆ ಓದಿಕೆ ಮಾಡುತ್ತಾರಂತೆ. ಪೂರ್ವದಲ್ಲಿ ಆ ಗಿಡದಿಂದ ಆ ದಿನ ಒಂದು ಕೇಜಿ ಸಕ್ಕರೆ ಬೀಳುತ್ತಿತ್ತಂತೆ. ಪ್ರಸ್ತುತ ಕಾಲದಲ್ಲಿ ಒಂದು ಹಿಡಿ ಮಾತ್ರ ಬೀಳುತ್ತದೆಂದು ಹೇಳುತ್ತಿದ್ದಾರೆ. (ಇದು ಹೇಳಿದರೆ ಕೇಳಿದ್ದೇನೆ ಹೊರತು ನಾನು ನೋಡಿಲ್ಲ)

**ನಾನು** :– ಇದೆಲ್ಲಾ ಬಾಬಾ ಪಕರುದ್ದೀನ್ (ಸತ್ಯಂರಾಜು) ಚರಿತ್ರೆ. ಆದರೆ ಸಾಯಬ್ ಬಾಬಾ ಏನಾದಂಗೆ? ಒಂದು ಬಾರಿಯಾದರು ಆತನು ನಿಮ್ಮ ಹತ್ತಿರಕ್ಕೆ ಬಂದಿದ್ದಾನಾ? ಅಥವಾ ನೀವು ಆತನ ಹತ್ತಿರಕ್ಕೆ ಹೋಗಿದ್ದೀರಾ? ಆತನು ಎಲ್ಲಿದ್ದಹಾಗೆ?

**ಆಕೆ** :– ಪೆನುಕೊಂಡ ಕೋಟೆ ಹತ್ತಿರ ಗುಹೆಯೊಳಗೆ ಮಾತನಾಡಿದ ನಂತರ ಸಾಯಬ್ ಬಾಬಾರವರು ನೂರು ಸಂವತ್ಸರಗಳ ಕಾಲ, ಮಹಾರಾಷ್ಟ್ರದಲ್ಲಿನ ಷಿರಿಡಿ ಹತ್ತಿರ ಭೂಮಿಯಲ್ಲಿ ಏರ್ಪಡಿಸಿಕೊಂಡ ಗುಹೆಯಲ್ಲಿ ಧ್ಯಾನದಲ್ಲಿದ್ದು, ನಂತರ ಹೊರಗೆ ಬಂದು ಷಿರಿಡಿಯಲ್ಲಿಯೆ ಅಲೆಯುತ್ತಿದ್ದನು. ಆಗಲು ಸಹ ಆತನ ಹೆಸರು ಸಾಯಬ್‌ಬಾಬಾನೆ! ಆದರೆ ಕಾಲಕ್ರಮೇಣ ಆತನ ಹೆಸರಿನಲ್ಲಿ ಸ್ವಲ್ಪ ಬದಲಾವಣೆ ಬಂದಿತು. ಚಿಕ್ಕಮಕ್ಕಳು ಬಾಯಿ ತಿರುಗದೆ **ಸಾಯಬ್** ಎನ್ನದೆ **ಸಾಯಬಾಬಾ** ಎನ್ನುತ್ತಿದ್ದರು. ಹಾಗೆ ಒಂದು ಅಕ್ಷರ ಆತನ ಹೆಸರಿನಲ್ಲಿ ಮಾಯವಾಗಿ ಹೋಗಿದೆ. ಸಾಯಬಾಬಾನಾಗಿ ಆತನ ಜೀವನಕಾಲವೆಲ್ಲಾ ಕಳೆದುಹೋಯಿತು. ಅಲ್ಲಿ ಆತನು ಸತ್ತುಹೋದರೂ ಸೂಕ್ಷ್ಮವಾಗಿಯೆ ಉಳಿದುಹೋಗಿದ್ದಾನೆ. ಸೂಕ್ಷ್ಮ ಶರೀರದಿಂದ ಮತ್ತೆ ಪೆನುಕೊಂಡ ಪ್ರಾಂತಕ್ಕೆ ಬಂದು, ಇಲ್ಲಿ ನಮ್ಮನ್ನು ನೋಡಿ ಆಶೀರ್ವಧಿಸಿ ಇಲ್ಲಿಗೆ ಹತ್ತಿರದಲ್ಲಿಯೇ ಇರುತ್ತೇನೆಂದು ಹೇಳಿ, ಸತ್ಯನಾರಾಯಣ ರಾಜು ಎನ್ನುವ ಬಾಲಕನಲ್ಲಿ ಸೇರಿ ಆ ಶರೀರದಲ್ಲಿಯೆ ಇಂದಿಗೂ ಪುಟ್ಟಪರ್ತಿಯಲ್ಲಿ ಇದ್ದಾನೆ. ಈಗ ನೂರು ವರ್ಷಗಳಿಂದ **ಸಾಯಿಬಾಬಾ** ಎಂದು ಕರೆಯಲ್ಪಡುತ್ತಿದ್ದಾನೆ. ಮೊದಲು ಪೆನುಕೊಂಡದಲ್ಲಿ ಸಾಯಬ್ ಬಾಬಾ ನಂತರ ಷಿರಿಡಿಯಲ್ಲಿ ಸಾಯಬಾಬಾನಾಗಿ, ಪ್ರಸ್ತುತ ಕಾಲದಲ್ಲಿ ಪುಟ್ಟಪರ್ತಿಯಲ್ಲಿ ಸಾಯಿಬಾಬಾನೆಂದು ಕರೆಯಲ್ಪಡುತ್ತಿದ್ದಾನೆ.

**ನಾನು** :– ಸಾಯಿಬಾಬಾನಾಗಿ ಎಷ್ಟುಕಾಲ ಬದುಕುತ್ತಾನೊ ಹೇಳುತ್ತೀಯಾ?

**ಆಕೆ** :– ಈಗ ನಾನು ಹೇಳುವುದು ಏನಿದೆ? ಮೂರು ಸಂವತ್ಸರಗಳ ಕೆಳಗೆ ನೀವೆ ಹೇಳಿದ್ದೀರ. ಆತನ ಆಯುಸ್ಸು 90 ರಿಂದ 96ರವರೆಗೆ ಇದೆಯೆಂದು

ಬಹುಶ 92ನೇ ವರ್ಷದಲ್ಲಿ ಸತ್ತುಹೋಗಬಹುದೆಂದು ಒಂದು ಸಂದರ್ಭದಲ್ಲಿ ಹೇಳಿದ್ದೀರ. 'ಚಂದ್ರನಲ್ಲಿ ನೀರು ಇವೆ' ಎಂದು ಸಹ ಆಗಲೇ ಹೇಳಿದ್ದೀರ.

**ನಾನು** :– ನಾನು ಯಾವಾಗಲೋ ಹೇಳಿರುವುದು ನಿನಗೆ ಹೇಗೆ ಗೊತ್ತು?

**ಆಕೆ** :– ನೀವು ಇದೇ ಪೆನುಕೊಂಡ ಪ್ರಾಂತದಲ್ಲಿ ನಿಮ್ಮ ಶಿಷ್ಯರೊಂದಿಗೆ ಸಹ ಜೀಪಿನಲ್ಲಿ ಬಂದು ರಾತ್ರಿಹೊತ್ತು ರೈಲ್ವೇ ಗೇಟ್ ಹತ್ತಿರವಿರುವ ಆಂಜನೇಯಸ್ವಾಮಿ ಗುಡಿಹತ್ತಿರ ನಿಂತುಕೊಂಡಾಗ. ಅಲ್ಲಿ ನಿಮ್ಮ ಶಿಷ್ಯರಿಗೆ ಹೇಳುತ್ತಿರುವಾಗ ನಾನು ಕೇಳಿದೆನು. ನಾನೇ ಅಲ್ಲ ನಮ್ಮ ಅಣ್ಣ ಬಾಬಾಫಕರುದ್ದೀನ್ ಸಹ ಕೇಳಿಸಿಕೊಂಡನು.

**ನಾನು** :– ಆ ಸಮಯದಲ್ಲಿ ನೀವು ಅಲ್ಲಿ ಏಕಿದ್ದೀರಾ. ಒಂದು ವಿಧದಲ್ಲಿ ಈ ಪ್ರಶ್ನೆ ನಾನು ಕೇಳಬಾರದು. ಆದ್ದರಿಂದ ಅದಕ್ಕೆ ಉತ್ತರ ಬೇಡ ಆದರೆ ಇಲ್ಲಿಗೆ ಏಕೆ ಬಂದಿದ್ದೀಯ? ಈ ಗರ್ಭಿಣಿ ಶರೀರದೊಳಗೆ ಏಕೆ ಬಂದಿದ್ದೀಯ?

**ಆಕೆ** :– ನಾನು ಮೊದಲೆ ಹೇಳಿದೆನಲ್ಲ! ಈಕೆ ನಮ್ಮ ಭಕ್ತಳೆಂದು, ಅಣ್ಣನ ಆಜ್ಞೆ ಪ್ರಕಾರ ನಾನು ಆಗಾಗ ಬಂದು ಯಾವ ದೆವ್ವಗಳು ಈಕೆ ಸಹವಾಸಕ್ಕೆ ಬಾರದಹಾಗೆ ನೋಡಿ ಹೋಗುತ್ತಿರುತ್ತೇನೆ. ಪ್ರಸ್ತುತವಾಗಿ ಎರಡು ದಿನಗಳಿಂದ ನಾನು ಪೆನುಕೊಂಡದಲ್ಲಿಯೇ ಇದ್ದೆನು, ಇಲ್ಲಿಗೆ ಬರಲಿಲ್ಲ. ಸಮಯ ನೋಡಿ ಒಂದು ದೆವ್ವ ಈಕೆಯಲ್ಲಿ ಸೇರಿದ್ದು, ನೀವು ಹೋಗಿ ಹೊರಗೆ ಕಳುಹಿಸಿ ಬರುವುದು ನಡೆಯಿತು.

ಬಾಬಾರವರು ಮಕ್ಕಾಗೆ ಹೋಗಿದ್ದಾನೆ ಆದ್ದರಿಂದ ಎರಡು ದಿನಗಳಿಂದ ಇಲ್ಲಿಗೆ ಬರಲು ಆಗಲಿಲ್ಲ. ಈಗ ಇಲ್ಲಿಗೆ ಬಂದ ನಂತರ ನೀವು ಬಂದು ಈಕೆಯನ್ನು ನೋಡಿಬಂದಹಾಗೆ ನನಗೆ ತಿಳಿಯಿತು. ಮೊದಲು ಒಂದು ಬಾರಿ ನಿಮ್ಮನ್ನು ನೋಡಿದ್ದೇನೆ ಆದ್ದರಿಂದ ಈಗ ನೋಡಬೇಕೆಂದು, ನಿಮ್ಮೊಂದಿಗೆ ಮಾತನಾಡಬೇಕೆಂದು ಬಂದಿದ್ದೇನೆ. ನನ್ನ ಕೋರಿಕೆ ನೆರವೇರಿತು.

**ನಾನು** :– ನಿಮ್ಮ ಅಣ್ಣ ಸತ್ಯಂರಾಜು ಬಾಬಾ ಫಕರುದ್ದೀನ್ ಎಂದು ಹೆಸರು

ಬದಲಾಯಿಸಿಕೊಂಡಾಗ, ನೀನು ನಿನ್ನಹೆಸರು ಬದಲಾಯಿಸಿಕೊಳ್ಳದೆ ಅಂಬೋಜಮ್ಮ ಎಂದು ಹಳೆಯ ಹೆಸರಿನಲ್ಲಿಯೆ ಇದ್ದೀಯ ಏಕೆ?

**ಆಕೆ** :– ಅಣ್ಣ ಸ್ವಂತವಾಗಿ ಹೆಸರು ಬದಲಾಯಿಸಿಕೊಂಡಿಲ್ಲ. ಅಣ್ಣನಿಗೆ ಸಾಯಬ್ ಬಾಬಾರವರು ಹೆಸರು ಬದಲಾಯಿಸಿದರು. ನನಗೆ ಯಾರೂ ಬದಲಾಯಿಸಲಿಲ್ಲ, ಆದ್ದರಿಂದ ಆ ಹೆಸರಿನಲ್ಲಿಯೇ ಇದ್ದೇನೆ.

**ನಾನು** :– ಪೆನುಕೊಂಡ ದರ್ಗಾದ ಹತ್ತಿರ ನೀವು ಇಬ್ಬರೆ ಇದ್ದೀರಾ?

ಆಕೆ :– ಸುಮಾರು ಎರಡು ನೂರು ಜನ ಇದ್ದಾರೆ. ಆದರೆ ನಮ್ಮಷ್ಟು ವಯಸ್ಸಿರುವವರು ಯಾರೂ ಇಲ್ಲ.

**ನಾನು** :– ಎರಡು ನೂರು ಜನ ಕಾಣಿಸುವವರಾ? ಕಾಣಿಸದೆ ಇರುವವರಾ?

**ಆಕೆ** :– ಕಾಣಿಸುವವರು ಬಂದು ಅವರ ಕೋರಿಕೆಗಳನ್ನು ಹೇಳಿಕೊಂಡು ಹೋಗುತ್ತಿರುತ್ತಾರೆ. ಕಾಣಿಸದವರೆ ಎರಡು ನೂರು ಜನ ಅಲ್ಲಿಯೇ ಇರುತ್ತಾರೆ. ಅಣ್ಣನಿಂದ ಜ್ಞಾನವನ್ನು ಹೇಳಿಸಿಕೊಳ್ಳುತ್ತಿರುತ್ತಾರೆ.

**ನಾನು** :– ಈಗ ನಿಮ್ಮ ಅಣ್ಣ ದರ್ಗಾದ ಹತ್ತಿರ ಇಲ್ಲವಲ್ಲ! ಈಗ ಯಾರು ಅಲ್ಲಿದೊಡ್ಡವರಾಗಿ ಇರುತ್ತಾರೆ.

**ಆಕೆ** :– ಯಾರೂ ಇರುವುದಿಲ್ಲ. ನಾನೇ ಹೋಗಬೇಕು. ಸ್ವಾಮಿಯವರೆ ಇನ್ನು ನನ್ನನ್ನು ಕಳುಹಿಸಿಕೊಡಿ ನಾನು ಹೋಗಿಬರುತ್ತೇನೆ.

***(ಕೊನೆಯಲ್ಲಿ ಆಕೆ ನಮಸ್ಕಾರ ಮಾಡಿ, ಗರ್ಭಿಣಿ ಶರೀರವನ್ನು ಬಿಟ್ಟು ಹೊರಟು ಹೋದಳು)***

ಇದೆಲ್ಲ ಒಂದು ಸಿನಿಮಾ ಕಥಯಂತೆ ಇದೆ ಅಲ್ಲವೆ! ಹಾಗೆಂದು ಕಥೆ ಅಂದುಕೊಂಡಿರಿ. ಎಲ್ಲವೂ ವಾಸ್ತವವೇ! ಅಂಬೋಜಮ್ಮ ಮಾತನಾಡುವುದರಿಂದ ಎಷ್ಟೋ ಹೊಸ ವಿಷಯಗಳು, ಯಾರಿಗೂ ತಿಳಿಯದ ರಹಸ್ಯಗಳು ತಿಳಿದಿವೆ. ಈ ಸಂಭಾಷಣೆ ನಡೆದು ಇಲ್ಲಿಗೆ ಮೂವತ್ತು ವರ್ಷಗಳಾಗಿದೆ. ನಾವು ಮಾತನಾಡಿದಾಗಿನಿಂದ ಮೂವತ್ತು ವರ್ಷಗಳು ಕಳೆದರೂ, ಶಿಷ್ಯನಾದ ಬಾಬಾ

ಪಕುರುದ್ದೀನ್, ಗುರುವಾದ ಸಾಯಬ್‌ಬಾಬಾರವರು ಇಂದಿಗೂ ಒಬ್ಬರು ಕಾಣಿಸುತ್ತಾ, ಒಬ್ಬರು ಕಾಣಿಸದಂತಿದ್ದಾರೆ. ಸಾಯಬ್‌ಬಾಬಾ ಕಾರಣದಿಂದಲೇ ಪೆನುಕೊಂಡ ಚರಿತ್ರೆ ಸಂತರಿಸಿಕೊಂಡಿದೆ. ವಿದೇಶಗಳಿಗು ಸಹಿತ ಬಾಬಾರವರಿಂದ ಪೆನುಕೊಂಡ ಹೆಸರು ತಿಳಿದಿದೆ. ಸೂಕ್ಷ್ಮಶರೀರಗಳನ್ನು ಕುರಿತು ಹೇಳುತ್ತಿದ್ದೇವೆ ಆದುದರಿಂದ ನೀವು ಸಹ ಸೂಕ್ಷ್ಮಶರೀರದಿಂದಲೇ ಇದ್ದೀರೆಂದು ತಿಳಿಸುವುದಕ್ಕೆ ಈ ಸಂಘಟನೆ ಹೇಳಬೇಕಾಗಿ ಬಂದಿದೆ. ಬಾಬಾರವರ ಭಕ್ತರು ಎಷ್ಟೋಜನ ದೆವ್ವಗಳು ಇಲ್ಲವೆನ್ನುತ್ತಿದ್ದಾರೆ. ಅವರಿಗು ಸಹ ಸೂಕ್ಷ್ಮ ಶರೀರಗಳೆಂದರೆ ಏನೋ, ಹೇಗೆ ಇರುತ್ತವೋ ಇದರ ಮೂಲಕ ಸುಲಭವಾಗಿ ತಿಳಿಯಬಲ್ಲದು, ಅಷ್ಟೇ ಅಲ್ಲ ಒಬ್ಬ ಮನುಷ್ಯ 70, 80, 90, 100 ವರ್ಷಗಳಿಗೇ ಅಲ್ಲದೆ ಸೂಕ್ಷ್ಮಶರೀರದೊಂದಿಗೆ ನೂರಾರು ವರ್ಷಗಳು ಬದುಕುತ್ತಿದ್ದಾನೆಂದು ಇದರ ಮೂಲಕ ತಿಳಿಯುತ್ತದೆ. ಮತ್ತು ಕಾಣಿಸದ ಜೀವನವನ್ನು ಸಹ ಒಳ್ಳೆಯ ಮಾರ್ಗದಲ್ಲಿ ನಡೆಸುಕೊಳ್ಳುವವರು ಭೂಮಿ ಮೇಲೆ ಎಷ್ಟೋ ಜನ ಇದ್ದಾರೆಂದು ಸಹ ಇದರ ಮೂಲಕ ತಿಳಿಯುತ್ತದೆ. ಇನ್ನೊಂದು ಮುಖ್ಯವಾದ ವಿಷಯ. ಕೆಲವರು ಹೊಸ ಜನ್ಮಕ್ಕೆ ಹೋಗದೆಯೇ ಶರೀರಗಳನ್ನು ಬದಲಿಸಿ ಬದುಕುತ್ತಿದ್ದಾರೆಂದು ಸಹ ಇದರ ಮೂಲವಾಗಿ ತಿಳಿಯುತ್ತಿದೆ.

ಸತ್ಯಸಾಯಿ ಬಾಬಾನಾಗಿ ಪುಟ್ಟಪರ್ತಿಯಲ್ಲಿರುವ ಸಾಯಬ್ ಬಾಬಾರವರು ಎಷ್ಟುಕಾಲ ಜೀವಿಸುತ್ತಾರೆಂದು ಕೆಲವರು ಕೇಳಿದಾಗ ಆತನ ಆಯುಸ್ಸು ದಶಾಚಾರದ ಪ್ರಕಾರ ದಶಮುಕ್ತಾಯಕ್ಕೆ 96 ವರ್ಷವಿದೆ. ಆದರೆ ದಶದಲ್ಲಿ 92 ವರ್ಷಗಳಿಗೆ ಮರಣಿಸುತ್ತಾನೆಂದು ನಾವು ಹೇಳುತ್ತಿದ್ದೇವೆ. ಈ ವಿಷಯ 2008ನೇ ವರ್ಷ ಹೇಳಿದ್ದೇವೆ. ಆಗ ಪುಟ್ಟಪರ್ತಿ ಸಾಯಿಬಾಬಾರವರು ಬದುಕೆ ಇದ್ದಾರೆ. ಈದಿನ ಈ ಗ್ರಂಥವನ್ನು 2016ನೇ ವರ್ಷದಲ್ಲಿ ಬರೆಯುತ್ತಿದ್ದೇನೆ. ಆದರೆ ಈಗ ಪುಟ್ಟಪರ್ತಿ ಸಾಯಿಬಾಬಾರವರು ಮರಣಿಸಿದ್ದಾರೆ. ಆತನು ಹುಟ್ಟಿದ ನಂತರ ಆತನ 87ನೇ ಹುಟ್ಟು ಹಬ್ಬ ನಡೆದ ನಂತರ ಮರಣಿಸುವುದು ನಡೆದಿದೆ. ನಾವು ಸಾಯಿಬಾಬಾರವರು 92 ವರ್ಷಗಳಿಗೆ ಮರಣಿಸುತ್ತಾನೆಂದಾಗ ಆತನು

ಐದು ವರ್ಷಗಳು ಮುಂಚೆಯೇ ಮರಣಿಸುವುದು ನಡೆದಿದೆ. ಹಾಗೆ ಮರಣಿಸುವುದರಿಂದ ನಾನು ಹೇಳಿದ ಮಾತು ಅಸತ್ಯವಾಗಿ ಕೆಲವರಿಗೆ ಕಾಣಿಸುವುದಾಗಿದೆ. ಆಗ ಬಹಳಜನರು ನನ್ನ ಹತ್ತಿರಕ್ಕೆ ಬಂದು ಸಾಯಿಬಾಬಾ ರವರು ಆಸ್ಪತ್ರೆಯಲ್ಲಿರುವಾಗ ಆತನ ಆಯಸ್ಸನ್ನು ಕುರಿತು ನಿಮ್ಮನ್ನು ಕೇಳಿದಾಗ, ನೀವು 92 ವರ್ಷಳಿಗೆ ಮರಣಿಸುತ್ತಾನೆಂದು ಹೇಳಿದ್ದೀರಲ್ಲ! ಈಗಲೇನೋ ಆತನು 87ನೇ ವರ್ಷವೇ ಮರಣಿಸಿದ್ದಾನೆ ಅದೇಗೆ ನಡೆದಿರುತ್ತ ದೆಂದು ವಿವರಕೇಳಿದ್ದಾರೆ. ಅಲ್ಲಿಯವರೆಗು ನಾನು ಹೇಳಿದ ಮಾತು ಅಸತ್ಯವಾದುದೆಂದು ಅಂದುಕೊಳ್ಳುತ್ತಿದ್ದೆನು, ಆದರೆ ಇತರರು ಬಂದು ನನ್ನನ್ನು ನಿಮ್ಮಮಾತು ಅಸತ್ಯವೆಂದು ಹೇಳಿದಾಗ, ಅವರ ಮಾತನ್ನು ಖಂಡಿಸುತ್ತಾ ಹೀಗೆ ಹೇಳುವುದು ನಡೆದಿದೆ. **ನನ್ನ ಮಾತು ಎಂದಿಗೂ ಅಸತ್ಯವಾಗುವುದಿಲ್ಲ**. ಸತ್ಯಸಾಯಿಬಾಬಾರವರು ಖಚಿತವಾಗಿ 92 ವರ್ಷಗಳಿಗೆ ಮರಣಿಸಿದ್ದಾನೆ ಎಂದು ನನ್ನ ಬಾಯಿಂದ ಮಾತು ಬರುವುದು ನನಗೆ ಸ್ವಲ್ಪ ಆಶ್ಚರ್ಯವಾಗಿದೆ. ನಂತರ "ಮಾತನಾಡುವ ಪ್ರತಿ ಮಾತು ನನ್ನದಲ್ಲ ನನ್ನ ತಂದೆಯಾದ ಆತ್ಮದೇ"ಯೆಂದು ಜ್ಞಾಪಕ ಬರುವುದು ನಡೆದಿದೆ.

ಒಂದು ದೈವ ಗ್ರಂಥದಲ್ಲಿ **"ನಿಮ್ಮ ತಂದೆ ಆತ್ಮ ನಿಮ್ಮಲ್ಲಿದ್ದು ಮಾತ ನಾಡುತ್ತಿದ್ದಾನೆ ಹೊರತು, ಮಾತನಾಡುವವರು ನೀವು ಅಲ್ಲ"** ಎಂದು ತಿಳಿಯುವುದಲ್ಲದೆ ಪ್ರಥಮ ದೈವಗ್ರಥವಾದ ಭಗವದ್ಗೀತೆಯಲ್ಲಿರುವ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿ 15ನೇ ಶ್ಲೋಕದಲ್ಲಿ **"ನಾನು ನಿಮ್ಮ ಹೃದಯ ಪೀಠದ ಮೇಲೆ ಇದ್ದೇನೆ. ನನ್ನಿಂದಲೇ ನಿಮಗೆ ಸ್ಮೃತಿ, ಊಹೆ, ಜ್ಞಾನ ಉಂಟಾಗುತ್ತಿದೆ" ಎಂಬ ಮಾತು ಸಹ ಜ್ಞಾಪಕ ಬಂದಿದೆ. ಅದರಿಂದ ಆಗ ಹೇಳುವಂತಹ ಮಾತುಗಳನ್ನು ಕೇಳುವುದು ನಡೆದಿದೆ. ಆಗ ಹೇಳಿದಂತಹ ಮಾತುಗಳು ಈ ವಿಧವಾಗಿ ಇವೆ. ಸತ್ಯನಾರಾಯಣ ಶರೀರದಲ್ಲಿ ಸಾಯಿಬಾಬಾ ನಿವಾಸಿಸುವುದು ಎಲ್ಲರಿಗೂ ತಿಳಿದಂತೆ 87 ವರ್ಷಗಳಾಗಿದೆ. ಆದರೆ ಎಲ್ಲರಿಗೂ ತಿಳಿಯದಂತೆ ಸತ್ಯನಾರಾಯಣ ಶರೀರದಲ್ಲಿ ಸಾಯಿಬಾಬಾರವರು ಐದು ವರ್ಷಗಳ**

**ಮುಂಚೆಯಿಂದ ನಿವಾಸಿಸುವುದು ನಡೆಯುತ್ತಿದೆ. ಆ ತಿಳಿಯದ ಐದು ವರ್ಷಗಳನ್ನು ಸೇರಿಸಿಕೊಂಡರೆ 92 ವರ್ಷಗಳ ಆಯಸ್ಸು ಪೂರ್ತಿ ಆದಂತೆ ಅಲ್ಲವೆ! ಸಾಯಿಬಾಬಾರವರು ಶಿರಿಡಿಯಲ್ಲಿ ಮರಣಿಸಿದ ನಂತರ ಮೂರು ವರ್ಷಗಳಿಗೆ ಆತನು ಹದಿನೈದು ಭಾಗಗಳ ಸೂಕ್ಷ್ಮಶರೀರದಿಂದ ಸತ್ಯನಾರಾಯಣ ರಾಜನ ಶರೀರದಲ್ಲಿ ಪ್ರವೇಶಿಸುವುದು ನಡೆದಿದೆ.** ಹಾಗೆ ಪ್ರವೇಶಿಸಿದ ಸಾಯಿಬಾಬಾರವರು ಆತನ ಶರೀರದಲ್ಲಿ ಬ್ರಹ್ಮನಾಡಿಯಲ್ಲಿ ಸೇರದಂತೆ ಉಳಿದ ಶರೀರದಲ್ಲಿ ಇರುತ್ತಾ ಒಂದು ದಿನಕ್ಕೆ ಒಂದು ಗಂಟೆ ಅಥವಾ ಎರಡು ಗಂಟೆಗಳು ಸತ್ಯನಾರಾಯಣ ರಾಜು ಶರೀರದಲ್ಲಿನ ಬ್ರಹ್ಮನಾಡಿಯನ್ನು ಸೇರಿದ್ದು ನಂತರ ಅದೇ ಶರೀರದಲ್ಲಿ ಪಕ್ಕದಲ್ಲಿಯೇ ಇರುತ್ತಿದ್ದನು. ಆದರೆ ಎರಡು ಅಥವಾ ಮೂರು ಗಂಟೆಗಳು ಬ್ರಹ್ಮನಾಡಿಯಲ್ಲಿದ್ದು ತಾನು ಸಾಯಿಬಾಬಾನೆಂದು ಹೇಳಿ ಪ್ರಜೆಗಳೊಂದಿಗೆ ಮಾತಾಡುತ್ತಿದ್ದನು. ಆ ವಿಷಯ ಎಲ್ಲರಿಗೂ ತಿಳಿದುಹೋದ ನಂತರ ಪೂರ್ತಿಮಟ್ಟದಲ್ಲಿ ಸತ್ಯನಾರಾಯಣ ರಾಜು ಶರೀರವನ್ನು ಆಕ್ರಮಿಸಿಕೊಳ್ಳುವುದು, ಪೂರ್ತಿ ಮೇಲಕ್ಕೆ ಮಾತನಾಡುವುದು ನಡೆದಿದೆ. ಇದನ್ನನುಸರಿಸಿ ಸತ್ಯಸಾಯಿ 92 ವರ್ಷಗಳು ಬದುಕಿದಂತೆ ಲೆಕ್ಕಿಸಲ್ಪಟ್ಟಿದೆ. ಈ ವಿಷಯವೆಲ್ಲವೂ ತಿಳಿದ ನಂತರ ನಾನು ಹೇಳಿದ ಮಾತು ತಪ್ಪದೆ ನೆರವೇರಿದೆಯೆಂದು ತೃಪ್ತಿಹೊಂದುವು ದಾಗಿದೆ.

**ಪ್ರಶ್ನೆ :- ಸಾಯಿಬಾಬಾರವರು ಪೂರ್ತಿಯಾಗಿ ಮರಣಿಸದೆ ಇರುವುದರಿಂದ, ಆತನು ಸೂಕ್ಷ್ಮ ಶರೀರದಿಂದ ಇರುವುದರಿಂದ, ಮತ್ತೊಂದು ಶರೀರವನ್ನು ಆವರಿಸಿ ಅದರಲ್ಲಿ ಬದುಕುವುದು ನಡೆದಿದೆಯೆಂದು ನೀವು ಹೇಳಿದ್ದೀರಾ. ನಡೆದ ಸಂಘಟನೆಗಳನ್ನನುಸರಿಸಿ ಅದು ನಿಜವೇಯೆಂದು ಸ್ವಲ್ಪಮಟ್ಟಿಗೆ ತಿಳಿಯುತ್ತಿದ್ದರೂ, ಇನ್ನೂ ಸ್ವಲ್ಪ ಅನುಮಾನ ಒಳಗೆ ಉಳಿದಿದೆ. ಇದು ಸಾಯಿಬಾಬಾ ಒಬ್ಬನಿಗೆ ಮಾತ್ರವೇ ನಡೆದಂತೆ ನಾನು ಅಂದುಕೊಳ್ಳುತ್ತಿದ್ದೇನೆ, ಇದಕ್ಕೆ ನೀವೇನು ಹೇಳುತ್ತಿರಾ?**

**ಉತ್ತರ :-** ಸಾಯಿಬಾಬಾ ವಿಷಯವನ್ನು ನಾವು ವಿವರವಾಗಿ ಹೇಳಿದ್ದೇವಾದ್ದರಿಂದ ಅದುಮಾತ್ರ ನಿನಗೆ ಸ್ವಲ್ಪ ಅರ್ಥವಾಗಿ, ಇದು ಸಾಯಿಬಾಬಾ ಒಬ್ಬನ ವಿಷಯದಲ್ಲಿ

ಮಾತ್ರ ನಡೆದಿದೆಯೆಂದು ಅಂದುಕೊಳ್ಳಬಹುದು. ಸತ್ಯ ತಿಳಿದರೆ ಆಶ್ಚರ್ಯವಾಗದೆ ತಪ್ಪುವುದಿಲ್ಲ. ನಿಜ ಹೇಳಿದರೆ ನೂರಕ್ಕೆ ಇಪ್ಪತ್ತು ಜನರಲ್ಲಿ ಮೇಲ್ನೋಟಕ್ಕೆ ಕಾಣಿಸುವ ವ್ಯಕ್ತಿಗಳಲ್ಲದೆ ಸೂಕ್ಷ್ಮಶರೀರಗಳೊಂದಿಗೆ ಅವರ ಶರೀರಗಳಲ್ಲಿ ಪ್ರವೇಶಿಸಿ ಮೇಲ್ನೋಟಕ್ಕೆ ಕಾಣಿಸುವ ಮನುಷ್ಯರಾಗಿ ನಟಿಸುತ್ತಿದ್ದಾರೆ. ಗಂಡನ ಶರೀರದಲ್ಲಿ ಹೆಂಡತಿಗೆ ತಿಳಿಯದಂತೆ ಬೇರೆ ಪುರುಷನು ಸೂಕ್ಷ್ಮಶರೀರದಿಂದ ಸೇರಿ ಗಂಡನನ್ನು ಇಲ್ಲದಂತೆ ಮಾಡಿ, ಸೇರಿದವರೆ ಗಂಡನಾಗಿ ನಟಿಸುವವರನ್ನು ಎಷ್ಟೋ ಜನರನ್ನು ನೋಡಿದ್ದೇವೆ. ಹಾಗೆಯೇ ಹೆಂಡತಿ ಶರೀರದಲ್ಲಿ ಗಂಡನಿಗೆ ತಿಳಿಯದಂತೆ ಬೇರೆ ಹೆಂಗಸರು ಸೇರಿ ಹೆಂಡತಿಯಂತೆ ನಟಿಸುತ್ತಾ ಆತನೊಂದಿಗೆ ಸಂಸಾರ ಮಾಡುವವರು ಸಹ ಇದ್ದಾರೆ. ಅವರು ನಾವು ಬೇರೆಯವರೆಂದು ಹೇಳುವುದಿಲ್ಲ. ಸಾಯಿಬಾಬಾ ನಾನು ಸತ್ಯನಾರಾಯಣ ರಾಜನು ಅಲ್ಲವೆಂದು ಹೇಳಿದ್ದಾನೆ. ಕಾಲ ಮರಣ, ಆಕಾಲ ಮರಣ, ತಾತ್ಕಾಲಿಕ ಮರಣಗಳನ್ನು ಕುರಿತು ತಿಳಿದ ನಾನು ಮರಣಿಸಿ ಸೂಕ್ಷ್ಮಶರೀರಗಳಾಗಿ ಉಳಿದವರನ್ನು, ಸೂಕ್ಷ್ಮಶರೀರಗಳೊಂದಿಗೆ ಇತರರಲ್ಲಿ ಸೇರಿದವರನ್ನು ಎಷ್ಟೋ ಜನರನ್ನು ನೋಡಿದ್ದೇವೆ. ಈ ವಿಷಯದಲ್ಲಿ ನಲವತ್ತು (40) ವರ್ಷಗಳ ಕೆಳಗೇ ನನ್ನ ಪರಿಶೋಧನೆ ಸಾಗಿದೆ. ಆಗಿನಿಂದ ನಾನು ಎಷ್ಟೋ ಸಂಘಟನೆಗಳನ್ನು ನೋಡಿದ್ದೇನೆ. ಎಷ್ಟೋ ಅನುಭವದಿಂದ ಸೂಕ್ಷ್ಮಗಳನ್ನು ಕುರಿತು ತಿಳಿಸುತ್ತಿದ್ದೇನೆ. ಮನುಷ್ಯರ ಸೂಕ್ಷ್ಮಗಳನ್ನೆ ಅಲ್ಲದೆ, ಆಕಾಶದಲ್ಲಿರುವ ಭೂತಗಳನ್ನು, ಉಪಭೂತಗಳನ್ನು, ಗ್ರಹಗಳನ್ನು, ಉಪಗ್ರಹಗಳನ್ನು, ಭೂಮಿಮೇಲೆ ಬದುಕಿರುವ ದೇವತೆಗಳನ್ನು ಕುರಿತು ಚೆನ್ನಾಗಿ ತಿಳಿದ ಅನುಭವವಿದೆ.

**ಪ್ರಶ್ನೆ :– ನೀವು ಹೇಳಿದಾಗ ಸಾಯಿಬಾಬಾ ವಿಷಯ, ಬಾಬಾ ಪಕುರುದ್ದೀನ್ ವಿಷಯ ಎರಡು ತಿಳಿದಿವೆ. ಈಗ ಪುಟ್ಟಪರ್ತಿಯಲ್ಲಿ ಸತ್ಯಸಾಯಿಯಾಗಿ ಚಲಾವಣೆಯಾದ ಶಿರಿಡಿ ಸಾಯಿಬಾಬಾರವರು ಮರಣಿಸುವುದಾಗಿದೆ. ಈಗಲಾದರೂ ಆತನು ಪೂರ್ತಿ ಮರಣವನ್ನು ಹೊಂದಿ ಎರಡನೆ ಜನ್ಮಕ್ಕೆ ಹೋಗಿದ್ದಾನಾ? ಅಥವಾ ಸೂಕ್ಷ್ಮಶರೀರದಲ್ಲಿಯೇ ಇದ್ದಾನಾ?**

**ಉತ್ತರ :–** ಈ ವಿಷಯವನ್ನು ನಾನು ಹೇಳಬೇಕಾದ ಅಗತ್ಯ ಇಲ್ಲದಂತೆ ಮರಣಿಸದ ಮುನ್ನವೇ ಸಾಯಿಬಾಬಾರವರು ಆ ವಿಷಯವನ್ನು ಪ್ರಕಟಿಸಿದ್ದಾರೆ. ನಾನು ಕರ್ನಾಟಕ ರಾಷ್ಟ್ರದಲ್ಲಿ ಇಂತಹ ಗ್ರಾಮದಲ್ಲಿ ಪ್ರೇಮಸಾಯಿಯಾಗಿ ಬರುತ್ತೇನೆಂದು ಹೇಳಿದ್ದಾನೆ. ಅಲ್ಲಿಗೆ ನಿಲ್ಲಿಸಿದ್ದರೆ ಸರಿಹೋಗುತ್ತಿತ್ತು. ಹಾಗದಲ್ಲದೆ ಆತನು ಪ್ರೇಮಸಾಯಿಯಾಗಿರುವ ಯುಕ್ತವಯಸ್ಸಿನಲ್ಲಿನ ಫೋಟೋ ಕೊಡುವುದು ನಡೆದಿದೆ. ಇದನ್ನನುಸರಿಸಿ ಯುಕ್ತವಯಸ್ಸಿನಲ್ಲಿರುವ ಆತನ ಶರೀರದಲ್ಲಿ ಈಗಿನಂತೆ ಸೇರಿಹೋಗುತ್ತಾನಾ ಅಥವಾ ಹೊಸದಾಗಿ ಹುಟ್ಟಿ ಬರುತ್ತಾನಾ ಎಂದು ಸಂದಿಗ್ಧದಲ್ಲಿ ಇದ್ದೇವೆ. ಆದುದರಿಂದ ನಂತರ ಜನ್ಮ ವಿಷಯವನ್ನು ಕುರಿತು ನಾವು ಸಹಾ ಏನು ಹೇಳಲಿಲ್ಲ.

**ಪ್ರಶ್ನೆ :– ಸಾಯಿಬಾಬಾ ರವರು ಜನ್ಮಿಸದಂತೆ ಮೋಕ್ಷಕ್ಕೆ ಹೋಗಲಿಲ್ಲ ಅನ್ನುತ್ತೀರಾ?**

**ಉತ್ತರ :–** ಆತನೇ ನಾನು ಇಂತಹ ಮನುಷ್ಯನಾಗಿ ಬರುತ್ತೇನೆಂದು ಮೊದಲೇ ಹೇಳಿರುವಾಗ ಮೋಕ್ಷ ಎಂಬ ಮಾತೇ ಇಲ್ಲಿ ಬರುವುದಿಲ್ಲ. ನಾನು ಮೋಕ್ಷಕ್ಕೆ ಹೋಗುವುದಿಲ್ಲ ಎಂದು ಆತನೇ ಹೇಳಿದಂತಲ್ಲವೆ!

**ಪ್ರಶ್ನೇ :– ಮೋಕ್ಷಕ್ಕೆ ಹೋಗಲಿಲ್ಲ ಆದ್ದರಿಂದ ಆತನನ್ನು ದೇವರೆಂದು ಹೇಳಬಾರದಲ್ಲವೆ! ಮೋಕ್ಷ ಹೊಂದಿದವನು ದೇವರೊಳಗೆ ಐಕ್ಯವಾಗಿರುತ್ತಾನೆ. ಆದುದರಿಂದ ಅವನನ್ನು ದೇವರೆನ್ನಬಹುದಲ್ಲವೆ! ಇದಕ್ಕೆ ನೀವೇನು ಹೇಳುತ್ತೀರಾ?**

**ಉತ್ತರ :–** ಮನುಷ್ಯ ಮೋಕ್ಷ ಹೊಂದಿದರೆ ದೇವರೊಳಗೆ ಐಕ್ಯವಾಗುವುದು ನಿಜವೇ. ಆದರೆ ಮೊದಲೇ ದೇವರಾಗಿರುವವನಿಗೆ ಮೋಕ್ಷದೊಂದಿಗೆ ಸಂಬಂಧವಿಲ್ಲ. ದೇವರು ಮನುಷ್ಯನಾಗಿ ಅವತರಿಸಿದಾಗ ಆತನು ಮೋಕ್ಷ ಹೊಂದದಿದ್ದರೂ ದೇವರೇ ಆಗುತ್ತಾನೆ. ಆತನೇ ಮೋಕ್ಷವಾಗಿರುವಾಗ ಆತನು ಪುನಃ ಮೋಕ್ಷ ಹೊಂದಬೇಕಾದ ಅವಶ್ಯಕತೆಯಿಲ್ಲ. ಮನುಷ್ಯ ಮೋಕ್ಷಹೊಂದಿ ದೇವರೊಳಗೆ ಬೆರೆತುಹೋಗಬಹುದು. ದೇವರು ಮನುಷ್ಯನಾಗಿ ಬಂದರೆ ಆತನು ಮೋಕ್ಷ ಪಡೆಯಬೇಕೆಂಬ ನಿಯಮ ಇಲ್ಲ.

**ಪ್ರಶ್ನೆ :– ಆದಿ ಶಂಕರಚಾರ್ಯರು ಸ್ಥಾಪಿಸಿದ ನಾಲ್ಕು ಪೀಠಗಳಲ್ಲಿ ಪ್ರಸ್ತುತ ದ್ವಾರಕ ಪಿಠಾಧಿಪತಿಯಾದ ಸ್ವರೂಪಾನಂದ ಶಿರಿಡಿ ಸಾಯಿಯನ್ನು ಕುರಿತು 24 (ಇಪ್ಪತ್ನಾಲ್ಕು) ಆರೋಪಣೆಗಳು ಮಾಡಿ ಆತನು ದೇವರಲ್ಲವೆಂದು, ಮುಸ್ಲಿಮ್ ಮತಕ್ಕೆ ಸಂಬಂಧಿಸಿದ ಪಕೀರ್‌ಯೆಂದು, ಆತನ ವಿಗ್ರಹವನ್ನು ಹಿಂದೂ ದೇವಾಲಯಗಳಿಂದ ತೆಗೆದುಹಾಕಬೇಕೆಂದು ಹೇಳುವುದು ನಡೆದಿದೆ. ಅಷ್ಟೇ ಅಲ್ಲ ಆತನು ಹಿಂದೂ ಗುರು ಅಲ್ಲವೆಂದು, ಹಾಗಿರುವಾಗ ಆತನನ್ನು ಗುರುವಾಗಿ ಭಾವಿಸಿ ಗುರುಪೌರ್ಣಮಿ ದಿನ ವಿಶೇಷ ಪೂಜೆಗಳು ಮಾಡುವುದು ತಪ್ಪೆಂದು, ಹಿಂದೂಗಳನ್ನು ಭಕ್ತಿ ಹೆಸರಿನಿಂದ ಸೀಳಿಸುವುದಕ್ಕೇ ಮುಸ್ಲಿಮ್‌ರು ಸಾಯಿಬಾಬಾನನ್ನು ದೇವರಾಗಿ ಸೃಷ್ಠಿಸಿ ಹಿಂದೂಗಳಲ್ಲಿ ಬಿಟ್ಟಿದ್ದಾರೆಂದು ತೀವ್ರವಾಗಿ ಆರೋಪಿಸುವುದು ನಡೆದಿದೆ. ಆತನ ಆರೋಪಣೆಗಳಲ್ಲಿ ಸಾರಾಂಶವಿದೆಯಾ? ಆತನ ಆರೋಪಣೆಗಳು ಸಕ್ರಮ ವಾದವುಗಳಾ?**

**ಉತ್ತರ :–** ದ್ವಾರಕಾ ಪೀಠಾಧಿಪತಿಯಾದ ಸ್ವರೂಪಾನಂದರು 2014 ನೇ ವರ್ಷವೇ ಈ ಆರೋಪಣೆಗಳು ಮಾಡಿದ್ದಾನೆ. ಆಗಿನಿಂದ ಆ ಸಮಸ್ಯೆಯನ್ನು ಉಳಿದ ಸ್ವಾಮೀಜಿಗಳು ಭುಜಕ್ಕೆ ಹಾಕಿಕೊಂಡು ಅದನ್ನೇ ಮುಂದುವರೆಸುತ್ತಿದ್ದಾರೆ. ಆರೋಪಣೆಗಳು ಮಾಡುವವರು ಸಹಜವಾಗಿ ಎಲ್ಲಿಯಾದರೂ ಇದ್ದಾರೆ. ಆದರೆ ಆ ಆರೋಪಣೆಗಳನ್ನು ಕೇಳಿದವರು ಇದು ನಿಜವಾ ಸುಳ್ಳಾಯೆಂದು ಯೋಚಿಸಿ ನಡೆದುಕೊಳ್ಳಬೇಕಾಗಿರುತ್ತದೆ. ಹಾಗಲ್ಲದೆ ಯಾರು ಹೇಗೆ ಕಲಿಸಿದರೆ ಹಾಗೆ ಹೋಗುವಂತೆ ನಾವು ಸಹ ಆಲೋಚಿಸದಂತೆ ಕುರುಡರಂತೆ ಮಾತನಾಡಬಾರದು. ಒಂದು ಅದ್ವೈತ ಪೀಠಕ್ಕೆ ಸಂಬಂಧಿಸಿದ ಸ್ವಾಮೀಜಿ ಆರೋಪಿಸಿದರೆ, ಅದ್ವೈತ ವನ್ನು ಅನುಸರಿಸುವ ಉಳಿದ ಸ್ವಾಮಿಗಳು, ಭಕ್ತರು ಎಲ್ಲರೂ ಅದೇ ಮಾತನಾಡುವುದರಲ್ಲಿ ಅರ್ಥವಿಲ್ಲ. ಒಂದುವೇಳೆ ಮಾತನಾಡಿದರೂ ಪ್ರತಿಯೊಂದಕ್ಕು ಆಧಾರ ತೋರಿಸಿ ಮಾತನಾಡಬೇಕಾಗಿರುತ್ತದೆ. ಆಧಾರ ಇಲ್ಲದಿದ್ದರೂ ಯಾವನೋ ಅಂದಿದ್ದಾನೆಂದು ನಾವು ಸಹ ಅಂದರೆ ಅದು ವಿಚಕ್ಷಣೆ ಎನಿಸಿಕೊಳ್ಳುವುದಿಲ್ಲ.

ಲೋಕಕ್ಕು (ಪ್ರಪಂಚಕ್ಕು) ಭಗವದ್ಗೀತೆ ಜ್ಞಾನವನ್ನು ಒದಗಿಸಿದ ಕೃಷ್ಣನು ಸಾಕ್ಷಾತ್ತು ಭಗವಂತನಾಗಿ ಭೂಮಿಮೇಲಕ್ಕೆ ಬಂದರೆ, ದೇವರ ಆತ್ಮವಾದ ಭಗವಂತನನ್ನು ಸಹ ಜಾರನು, ಚೋರನು, ಅಂದವರು ಇದ್ದಾರೆ. ಎಂತಹವನನ್ನಾದರೂ ವಿಮರ್ಶಿಸದಂತೆ ಯಾರೂ ಬಿಡುವುದಿಲ್ಲ. ಸಾಮಾನ್ಯ ಮಾನವರಾದ ನಮ್ಮನ್ನು ಸಹ ಬಿಡದಂತೆ ವಿಮರ್ಶಿಸಿದವರು ಇದ್ದಾರೆ. ಯಾರಿಗಾದರೂ ಎಂತಹವರಿಗಾದರೂ ವಿಮರ್ಶೆಗಳು, ಆರೋಪಣೆಗಳು ಸಹಜವೇ. ಅವುಗಳನ್ನು ಕೇಳುವವರೇ ವಿಚಕ್ಷಣೆಯಿಂದ ಯೋಚಿಸಬೇಕಾಗಿರುತ್ತದೆ. ಹಾಗಾದರೇನೆ ಅಸತ್ಯವನ್ನು ಬಿಟ್ಟು ಸತ್ಯ ಆಶ್ರಯಿಸಿದಂತಾಗುತ್ತದೆ.

(ಈ ಮಧ್ಯಕಾಲದಲ್ಲಿ ಸುಮಾರು ಹದಿನೈದು ದಿನಗಳ ಕೆಳಗೆ ಟಿವಿ9ನಲ್ಲಿ **'ಸ್ವಾಮಿಗಳ ಲಡಾಯಿ'** ಎಂದು ಒಂದು ಚರ್ಚಾವೇದಿಕೆ ನಿರ್ವಹಿಸಲಾಗಿತ್ತು. ಅದರಲ್ಲಿ ಕರ್ನಾಟಕ ಹಂಪಿಯಲ್ಲಿರುವ ಪಂಪಾಕ್ಷೇತ್ರದ ಪೀಠಾಧಿಪತಿಯಾದ **'ಗೋವಿಂದಾನಂದ'** ಸಾಯಿಬಾಬಾನನ್ನು ದೇವರು ಅಲ್ಲವೆಂದು ವಿಮರ್ಶಿಸುವುದಕ್ಕೆ ಬಂದರೆ, ಸಾಯಿಬಾಬಾ ದೇವರೇಯೆಂದು ಹೇಳುವುದಕ್ಕೆ ವಿಶಾಖ ಪಟ್ಟಣ ದಲ್ಲಿರುವ ಸೀತಮ್ಮಧಾರೆಗೆ ಸೇರಿದ **'ರಮಣಾನಂದ ಮಹರ್ಷಿ'** ಬಂದಿದ್ದಾರೆ. t.v ಯಾಂಕರ್‌ರಾಗಿ **ಸತ್ಯ** ಇರುವಾಗ ನಡೆದ ಚರ್ಚಾವೇದಿಕೆಯಲ್ಲಿ ಮಧ್ಯದಲ್ಲಿ ಫೋನ್ ಮುಖಾಂತರ ಕೆಲವರು ಪ್ರೇಕ್ಷಕರು ಸಹ ಮಾತನಾಡಿ ಪ್ರಶ್ನೆಗಳು ಕೇಳಿದ್ದಾರೆ. ಅವರ ಸಂಭಾಷಣೆಗಳು ಕೆಳಗೆ ಈ ವಿಧವಾಗಿವೆ. ಅವರು ಕೇಳಿದ ಪ್ರಶ್ನೆಗಳಿಗೆ ಇಲ್ಲಿ ನನ್ನ ಸಮಾಧಾನಗಳನ್ನು ಜೋಡಿಸಿ ಹೇಳುತ್ತಿದ್ದೇನೆ. ಚರ್ಚಾವೇದಿಕೆಯಲ್ಲಿನ ಅವರ ಮಾತುಗಳಿಂದ ಬಹಳಜನರಿಗೆ ಏನು ಅರ್ಥ ವಾಗಲಿಲ್ಲ. ಯಾವುದು ನ್ಯಾಯವೋ, ಯಾವುದು ಅನ್ಯಾಯವೋ ತಿಳಿಯಲಿಲ್ಲ. ಹಾಗೆಯೇ ಯಾರ ಮಾತು ಜ್ಞಾನವೋ, ಯಾರ ಮಾತು ಅಜ್ಞಾನವೋ ಸಹ ಅರ್ಥವಾಗಲಿಲ್ಲ. ಆದುದರಿಂದ ಅವರ ಪ್ರಶ್ನೆಗಳಿಗೆ ನಾವು ಉತ್ತರಗಳು ಹೇಳುವುದರಿಂದ ಪ್ರಪಂಚ ಸಂಬಂಧ ನ್ಯಾಯಾನ್ಯಾಯಗಳು, ದೈವಸಂಬಂಧ ಜ್ಞಾನಾಜ್ಞಾನಗಳು ತಿಳಿಯುತ್ತವೆಂದು ಅಂದುಕೊಳ್ಳುತ್ತಿದ್ದೇನೆ.)

**ಪ್ರಶ್ನೆ :– (t.v9) ಶಿರಿಡಿ ಸಾಯಿಬಾಬಾನನ್ನು ಪೂಜಿಸುವುದರಿಂದಲೇ ಮಹಾರಾಷ್ಟ್ರದಲ್ಲಿ ಬರಗಾಲ ಬಂದಿದೆಯೆಂದು ಕೆಲವರು ಆರೋಪಿಸುತ್ತಿದ್ದಾರೆ. ಇದು ಎಷ್ಟರಮಟ್ಟಿಗೆ ವಾಸ್ತವ?**

**ನನ್ನ ಉತ್ತರ :–** ಶಿರಿಡಿ ಸಾಯಿಬಾಬಾನನ್ನು ಶಿರಿಡಿಯಲ್ಲಿ ಸುಮಾರು 160 ವರ್ಷಗಳಿಂದ ಗುಡಿಕಟ್ಟಿ ಪೂಜಿಸುತ್ತಿದ್ದಾರೆ. ಸಾಯಿಬಾಬಾನನ್ನು ಪೂಜಿಸುವುದರಿಂದ ಬರ ಬಂದಿದೆಯೆಂದರೇ, 160 ವರ್ಷಗಳಿಂದ ಬರ ಇದ್ದರೆ ಆ ಮಾತು ಸರಿಹೋಗುತ್ತದೆ. ಏನೋ ಒಂದು ವರ್ಷ ವಾತಾವರಣ ಬದಲಾವಣೆಯಿಂದ ಅನಾವೃಷ್ಟಿಯಿಂದ ಬರ ಬಂದರೆ ಅದಕ್ಕು ಸಾಯಿ ಪೂಜೆಗು ಎಂಥಹ ಸಂಬಂಧವಿಲ್ಲ. ಸರಿಹೋಗದಿರುವಾಗ ಏನೋ ಒಂದು ಮಾತನಾಡಬೇಕೆಂದು ಮಾತನಾಡುವ ಅಸೂಯೆ ಮಾತುಗಳು ಹೊರತು ಅದರಲ್ಲಿ ಸತ್ಯವಿಲ್ಲ. ಬರಗಾಲ ಪ್ರಕೃತಿಗೆ ಸಂಬಂಧಿಸಿದ ಸಮಸ್ಯೆಯೇ ಹೊರತು, ಪೂಜೆಗಳಿಗೆ ಸಂಬಂಧಿಸಿರುವುದು ಅಲ್ಲ.

**ಪ್ರಶ್ನೆ :– (ಗೋವಿಂದಾನಂದ) ಸಿದ್ಧಾಂತಗಳು ಮೂರೇ ಇವೆ. ಅದರಲ್ಲಿ ಯಾವ ಸಿದ್ಧಾಂತಕ್ಕೆ ಸಂಬಂಧಿಸಿದವನು ಶಿರಿಡಿ ಸಾಯಿಬಾಬಾ?**

**ನನ್ನ ಉತ್ತರ :–** ಗೋವಿಂದಾನಂದ ಎಂಬ ಒಬ್ಬ ಸನ್ಯಾಸಿ ಅನವಶ್ಯಕ ರಾದ್ಧಾಂತವನ್ನು ತೆಗೆದುಕೊಂಡು ಬಂದು t.v9 ಕೆಮೆರಾಮುಂದೆ ಕುಳಿತುಕೊಂಡಿದ್ದಾನೆ. ಈ ವಾದನೆಯಲ್ಲಿ ಆತನು ಹೊರಗೆ ತಿಳಿಯಬೇಕೆಂಬ ಕುತೂಹಲ ಹೊರತು ಉಳಿದ ಸಾರಾಂಶ ಏನು ಕಾಣಿಸಲಿಲ್ಲ. ಪ್ರತಿ ಉತ್ತರಕ್ಕು ಅಡ್ಡ ಮಾತನಾಡಿ ಇನ್ನೊಬ್ಬರನ್ನು ತಪ್ಪು ಹಿಡಿಯುವುದು ಹೊರತು, ಆತನ ಹತ್ತಿರ ಸಾರಾಂಶವಾದ ಯಾವ ವಿದ್ಯೆಯಿಲ್ಲ. ಸಂಪೂರ್ಣಜ್ಞಾನ ತಿಳಿದವನಾಗಲಿ, ಸ್ವಲ್ಪಜ್ಞಾನ ತಿಳಿದವನಾಗಲಿ ಹಾಗೆ ಅಡ್ಡವಾಗಿ ಮಾತನಾಡುವುದಿಲ್ಲ. ರಮಣಾನಂದ ಹೇಳುವ ಉತ್ತರ ಏನು ಎನ್ನುವುದು ಸಹ ಕೇಳಿಸದಂತೆ ಜೋರಾಗಿ ಅರಚುವುದು ಹೊರತು ತಾನು ಹೇಳುವುದು ಏನು ಇಲ್ಲ. ಒಂದು ಪ್ರಶ್ನೆ ಹಾಕಿದಾಗ ಒಬ್ಬ

ವ್ಯಕ್ತಿ ಹೇಳುವ ಉತ್ತರವನ್ನು ಕೇಳಬೇಕು ಅಲ್ಲವೆ! ಹೇಳಿದ ಉತ್ತರ ಸರಿಯಾಗಿಲ್ಲದಿದ್ದರೆ ಆಗ ಅದನ್ನು ಕುರಿತು ಮಾತನಾಡುವುದು ಒಳ್ಳೆಯದು. ಹಾಗಲ್ಲದೆ ಹೇಳುವ ಸಮಾಧಾನವನ್ನು ಕೇಳದಂತೆ ಮಾತನಾಡುವುದರಿಂದ ಆತನು ಉತ್ತರಕ್ಕಾಗಿ ಬರಲಿಲ್ಲವೆಂದು, ಅನವಶ್ಯಕ ರಾದ್ಧಾಂತ ಮಾಡುವುದಕ್ಕೆ ಬಂದಿದ್ದಾನೆಂದು ಮಾತ್ರ ಆ ದೃಶ್ಯವನ್ನು ನೋಡಿದವರೆಲ್ಲರಿಗೂ ಅರ್ಥವಾಗುತ್ತದೆ. ಈಗ ಆತನು ಕೇಳಿದ ಪ್ರಶ್ನೆ ಯಾವ ಸಿದ್ಧಾಂತದ ಪ್ರಕಾರ ಸಾಯಿಬಾಬಾ ಇದ್ದಾನೆಂದು ಕೇಳಿದ್ದಾನೆ? ಅಷ್ಟೇ ಅಲ್ಲದೆ ಸಿದ್ಧಾಂತಗಳು ಮೂರು ಇವೆಯೆಂದು ಸಹ ಹೇಳಿದ್ದಾನೆ.

ಆದಿ ಶಂಕರಾಚಾರ್ಯರ ಅದ್ವೈತ ಮೊದಲನೆಯದಾದಾಗ, ನಂತರ ಬಂದಿರುವುದು ರಾಮಾನುಜಾಚಾರ್ಯರ ಅವರೊಂದರ ವಿಶಿಷ್ಟಾದ್ವೈತ ಸಿದ್ಧಾಂತ. ಆ ನಂತರ ಬಂದಿರುವುದು ಮಧ್ವಾಚಾರ್ಯರ ದ್ವೈತ ಸಿದ್ಧಾಂತ. **ಇಲ್ಲಿಗೆ 38 ವರ್ಷಗಳ ಕೆಳಗೆ ತ್ರೈತ ಸಿದ್ಧಾಂತ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರ ಮುಖಾಂತರ ಪ್ರಕಟಿಸಲ್ಪಟ್ಟಿದೆ.** ಆಗಿನಿಂದ ಇಲ್ಲಿಯವರೆಗು ಪ್ರಚಾರ ಮಾಡುತ್ತಲೇ ಇದ್ದೇವೆ. ತ್ರೈತ ಸಿದ್ಧಾಂತವನ್ನು ಅನುಸರಿಸಿ ಇಲ್ಲಿಗೆ 86 ಗ್ರಂಥಗಳು ಬರೆಯಲ್ಪಟ್ಟಿವೆ. ಮುಖ್ಯವಾಗಿ "ತ್ರೈತ ಸಿದ್ಧಾಂತ ಭಗವದ್ಗೀತೆ" ಬರೆಯಲ್ಪಟ್ಟು ಪ್ರಚಾರ ಮಾಡಲಾಗಿದೆ. ಇಂಟರ್‌ನೆಟ್‌ನಲ್ಲಿ ತ್ರೈತ ಸಿದ್ಧಾಂತ ಗ್ರಂಥಗಳೆಲ್ಲವೂ ಇವೆ. ಅಷ್ಟೇ ಅಲ್ಲದೆ ಆಂಧ್ರ ಮತ್ತು ತೆಲಂಗಾಣ ರಾಜ್ಯಗಳಲ್ಲಿ **"ತ್ರೈತ ಸಿದ್ಧಾಂತ ಭಗವದ್ಗೀತೆ"** ಎಂಬ ಹೆಸರು ಕೇಳದವರಿಲ್ಲ. ಇಂದಿಗೂ 5 ವರ್ಷಗಳಿಂದ ಪ್ರತಿ ಊರಿನಲ್ಲಿ ಗೋಡೆಗಳಮೇಲೆ **"ತ್ರೈತ ಸಿದ್ಧಾಂತ ಭಗವದ್ಗೀತೆ"** ಯನ್ನು ಓದಿರಿ ಎಂದು ಬರೆಸಿದ್ದೇವೆ. ಈದಿನ ತ್ರೈತ ಸಿದ್ಧಾಂತದ ಪ್ರಚಾರ, ತ್ರೈತ ಸಿದ್ಧಾಂತ ಭಗವದ್ಗೀತೆ ಕರ್ನಾಟಕ ರಾಜ್ಯದೊಳಗೆ ಸಹ ಪ್ರವೇಶಿಸಿದೆ. ಈದಿನ ಬಹಳ ಜನ ಜ್ಞಾನಿಗಳಿಗು, ಅಜ್ಞಾನಿಗಳಿಗು ತ್ರೈತ ಸಿದ್ಧಾಂತವೆನ್ನುವುದು ಹತ್ತಿರವಾಗಿ ತಿಳಿದಿದೆ. ಹೀಗಿರುವಾಗ ಸಿದ್ಧಾಂತಗಳು ಮೂರೇ ಇವೆಯೆಂದು ಹೇಳುವುದು ವಿಚಿತ್ರವಾಗಿದೆ. ಈದಿನ ಎಲ್ಲರಿಗೂ ನಾಲ್ಕನೇ ಸಿದ್ಧಾಂತವನ್ನು ಕುರಿತು

ತಿಳಿದಿರುವಾಗ, ಆತನು ಮೂರೇ ಇವೆಯೆಂದು ಹೇಳುವುದರಿಂದ ಆತನಿಗೆ ಏನು ತಿಳಿದಿಲ್ಲವೆಂದೆನಿಸುತ್ತದೆ, ನಲವತ್ತು ವರ್ಷಗಳ ಹಿಂದೆಯೇ ಇದ್ದಾನೆನಿಸುತ್ತಿದೆ.

ಈ ದಿನ ತ್ರೈತ ಸಿದ್ಧಾಂತವನ್ನು ನೋಡಿದ ಬಹಳ ಜನರು ಸ್ವಾಮೀಜಿಗಳು ಅದು ಹಿಂದೂಮತದಲ್ಲಿ ಒಂದು ಸಿದ್ಧಾಂತವೆಂದು ತಿಳಿದರೂ, ತಾವಿರುವ ಅದ್ವೈತವೇ ದೊಡ್ಡದೆಂಬ ಭಾವನೆಯಿಂದ ತ್ರೈತ ಸಿದ್ಧಾಂತದ ಸಾರಾಂಶವೇನೆಂದು ನೋಡದೆಯೇ ತ್ರೈತ ಸಿದ್ಧಾಂತ ಕ್ರೈಸ್ತರದು. ಕ್ರೈಸ್ತರು ತಮ್ಮ ಬೈಬಲ್ ಬೋಧನೆಗಳನ್ನು ತ್ರೈತ ಸಿದ್ಧಾಂತ ಭಗವದ್ಗೀತೆಯೆಂದು ಹೆಸರಿಟ್ಟು, ಭಗವದ್ಗೀತೆ ಮುಸುಗಿನಲ್ಲಿ ತಮ್ಮ ಮತವನ್ನು ಪ್ರಚಾರ ಮಾಡುತ್ತಿದ್ದಾರೆಂದು ಕೆಟ್ಟ ಆರೋಪಣೆಗಳನ್ನು ಮಾಡುತ್ತಿದ್ದಾರೆ. ಕ್ರೈಸ್ತರು ಹಿಂದೂಗಳ ಆರೋಪಣೆಗಳನ್ನು ನೋಡಿ ನಗುತ್ತಿದ್ದಾರೆ. ಹಿಂದೂಗಳು ಕೊನೆಗೆ ಅವರ ಗ್ರಂಥಗಳನ್ನು ಅವರೇ ನಂಬಲಾರದ ಸ್ಥಿತಿಗೆ ಬಂದಿದ್ದಾರೆಂದು, ಕ್ರೈಸ್ತರ ಬೈಬಲ್‌ನನ್ನು ನೋಡಿ ಭಯಪಡುತ್ತಿದ್ದಾರೆಂದು ಹೇಳಿಕೊಳ್ಳುತ್ತಿದ್ದಾರೆ. ಕೆಲವರು ಸ್ವಾಮಿಗಳಿಗೆ ತ್ರೈತ ಸಿದ್ಧಾಂತ ಭಗವದ್ಗೀತೆ ಹಿಂದೂಗಳಲ್ಲಿನ ಒಂದು ಸಿದ್ಧಾಂತಕ್ಕೆ ಸಂಬಂಧಿಸಿರುವು ದೆಂದು ತಿಳಿದಿದೆ. ಆದರೂ ಅದು ಇತರ ಮತಸ್ಥರದೆಂದು ಹೇಳುವುದು ಬಿಡಲಿಲ್ಲ. ಭಾರತದೇಶದಲ್ಲಿ ಅದ್ವೈತ ಸಿದ್ಧಾಂತ ಬಲವಾಗಿರುವುದರಿಂದ ಮೊದಲು ವಿಶಿಷ್ಟಾದ್ವೈತವನ್ನು ಸಹ ಹಾಗೆಯೇ ವಿಮರ್ಶಿಸಿ ವಿಶಿಷ್ಟಾದ್ವೈತರನ್ನು ಹೊಡೆಯುವುದು, ಸಾಯಿಸುವುದು ಮಾಡಿದ್ದಾರೆ. ಚರಿತ್ರೆಯಲ್ಲಿ ತಾವೇ ಇರಬೇಕೆನ್ನುವಂತೆ ಅದ್ವೈತರು ಪ್ರವರ್ತಿಸುತ್ತಿದ್ದಾರೆ.

**ಪ್ರಶ್ನೆ :– (ಗೋವಿಂದಾನಂದ) ಆದಿ ಶಂಕರಾಚಾರ್ಯರು ಸ್ಥಾಪಿಸಿರುವ ನಾಲ್ಕು ಪೀಠಗಳಲ್ಲಿ ಆ ಪೀಠಾಧಿಪತಿಗಳಾಗಿ ಯಾರಿದ್ದರೂ ಅವರು ಆದಿಶಂಕರಾಚಾರ್ಯರೊಂದಿಗೆ ಸಮಾನವೇಯೆಂದು ಸ್ವತಃವಾಗಿ ಶಂಕರಾಚಾರ್ಯರೇ ಹೇಳಿದ್ದಾರೆ. ಹಾಗಿರುವಾಗ ನಾಲ್ಕು ಪೀಠಗಳಲ್ಲಿ ಒಂದಾದ ದ್ವಾರಕಾ ಪೀಠಾಧಿಪತಿಯಾದ ಸ್ವರೂಪನಂದ ಮಾಡಿದ ಆರೋಪಣೆಗಳನ್ನು ಸರಿಯಲ್ಲ ಎನ್ನುತ್ತೀರಾ?**

**ನನ್ನ ಉತ್ತರ :–** ಆದಿ ಶಂಕರಾಚಾರ್ಯರು ನಾಲ್ಕು ಪೀಠಾಧಿಪತಿಗಳು ತನ್ನೊಂದಿಗೆ ಸಮಾನವೆಂದು ಆದು ಶಂಕರರೇ ಹೇಳಿದಂತೆ ಹೇಳಿ, ಶಂಕರಾಚಾರ್ಯರಿಗೆ ಪ್ರಜೆಗಳಲ್ಲಿರುವ ಗೌರವವನ್ನು ತಮಗೆ ಇರಬೇಕೆಂದು ಅಂದುಕೊಳ್ಳುವುದು ಹೊರತು ಅದರಲ್ಲಿ ಸತ್ಯ ಇಲ್ಲ. ಶಂಕರಾಚಾರ್ಯರು ಆ ಮಾತು ಹೇಳಿದ್ದಾನೆಂದು ಈದಿನ ಇವರು ಹೇಳುತ್ತಿದ್ದಾರೇ ಹೊರತು ಆ ಮಾತು ಹೇಳಿದ್ದಾನೆನ್ನುವುದಕ್ಕೆ ಆಧಾರವೇ ಇಲ್ಲ. ಆ ಮಾತನ್ನು ಹೇಳುವ ಅವಶ್ಯಕತೆಯೇ ಇಲ್ಲದಿರುವಾಗ ಶಂಕರಾಚಾರ್ಯರು ಹೇಗೆ ಹೇಳಬಲ್ಲನು. ಗುಜರಾತ್‌ನಲ್ಲಿ ದ್ವಾರಕದಲ್ಲಿ ಜಾಮ್‌ನಗರದಲ್ಲಿ ಶಂಕರನಿಗೆ 18 ವರ್ಷಗಳ ವಯಸ್ಸಿನಲ್ಲಿಯೇ ಮಖ ನಕ್ಷತ್ರ ಶುಕ್ಲ ಸಪ್ತಮಿ ತಿಥಿ ದಿನದಂದು ಮೊದಲನೆ ಪೀಠವನ್ನು ಸ್ಥಾಪಿಸಿದ್ದಾರೆ. 17 ದಾಟಿ 18ನೇ ವರ್ಷ ಕಳೆಯುತ್ತಿರುವಾಗ ಶಂಕರನಿಂದ ಆ ದಿನದ ಆರ್ಯರು ದ್ವಾರಕದಲ್ಲಿನ ಕಾಳಿ ಪೀಠವನ್ನು ಸ್ಥಾಪಿಸಿದ್ದಾರೆ. ಶಂಕರನು ಕಾಲ್ನಡಿಗೆಯಲ್ಲಿ ತನ್ನ 15ನೇ ವರ್ಷ ದಾಟಿ 16ರಲ್ಲಿ ಬೀಳುತ್ತಲೇ ದೇಶಪರ್ಯಟನೆ ಪ್ರಾರಂಭ ಮಾಡಿದ್ದಾನೆ. ಆ ದಿನದ ಪರಿಸ್ಥಿತಿಯನ್ನು ನೋಡಿದರೆ ಆ ವಯಸ್ಸಿನಲ್ಲಿ ಅದ್ವೈತವೆಂದರೇ ಏನೊ ಸಹ ಆತನಿಗೆ ತಿಳಿದಿಲ್ಲ. ಆದರೂ ಆತನನ್ನು ಗೊಂಬೆಯಂತೆ ತೋರಿಸಿ ಅದ್ವೈತವನ್ನು ಬೋಧಿಸಿದವರು, ಹಾಗೆಯೇ ದ್ವಾರಕಾ ಪೀಠವನ್ನು ಸ್ಥಾಪಿಸಿದ ಅವರು ಆರ್ಯರೇ ಎಂದು ಹೇಳದೆ ತಪ್ಪಲಿಲ್ಲ. ಆ ದಿನ ಆರ್ಯರ ಕೈಯಲ್ಲಿ ಕೀಲುಗೊಂಬೆಯಂತೆ ಸಿಲುಕಿಕೊಂಡು ತನ್ನ ಪರಿಸ್ಥಿತಿ ಯನ್ನು ಯಾರಿಗೂ ಹೇಳಿಕೊಳ್ಳಲಾರದೆ ದುಃಖಪಟ್ಟ ಶಂಕರನು ಆ ಪೀಠಾಧಿಪತಿ ಗಳು ತನಗೆ ಸಮಾನವೆಂದು ಹೇಳಿರುತ್ತಾರೇನೊ ನೀವೇ ಆಲೋಚಿಸಿರಿ. ಆಂದಿನ ಯಥಾಸ್ಥಿತಿ ತಿಳಿಯಬೇಕೆಂದರೇ ನಮ್ಮ ರಚನೆಗಳಲ್ಲಿ **"ಹಿಂದೂ ಮತದಲ್ಲಿ ಸಿದ್ಧಾಂತಕರ್ತರು"** ಎಂಬ ಗ್ರಂಥವನ್ನು ಓದಿರಿ. ಅದ್ವೈತ ಹೆಸರಿನಿಂದ ಆರ್ಯರು ಎಷ್ಟು ಮೋಸ ಮಾಡಿರುವುದು ತಿಳಿದುಹೋಗುತ್ತದೆ.

ಪ್ರತ್ಯಕ್ಷವಾಗಿ ಇರುವ ಒಂದು ಕುಟುಂಬದಲ್ಲಿ ಒಬ್ಬ ತಂದೆಗೆ ನಾಲ್ಕುಜನ ಗಂಡುಮಕ್ಕಳಿದ್ದರೆ ಎಲ್ಲರೂ ಒಂದೇ ವಿಧವಾಗಿ ಇರದೆ ಅವರವರ ಬುದ್ಧಿ

ಯಲ್ಲಿಯೂ, ಅವರವರ ಭಾವನೆಯಲ್ಲಿಯೂ ಒಬ್ಬೊಬ್ಬರು ಒಂದೊಂದು ವಿಧವಾಗಿ ಇರುವುದು ಎಲ್ಲರಿಗೂ ತಿಳಿದ ವಿಷಯವೇ. ಹಾಗಿರುವಾಗ ಯಾವಾಗಲೋ 2500 ವರ್ಷಗಳ ಕೆಳಗೆ ಸ್ಥಾಪಿಸಿದ ಪೀಠದಲ್ಲಿ ಈ ದಿನ ಪೀಠಾಧಿಪತಿಗಳಾಗಿ ಇರುವವರು ಶಂಕರನೊಂದಿಗೆ ಸಮಾನವಾಗಿ ಇರುತ್ತಾರೆಂದು ಹೇಳುವುದು ನಂಬಲಾರದ ಮಾತು. ಆರ್ಯರು ಇಂದಿಗೂ ಸಹ ಮನುಷ್ಯರ ಮೇಲೆ ಹಿರೆತನ ಮಾಡುವುದಕ್ಕೆ ಹೇಳುವ ಮಾತುಗಳೆ ಹೊರತು ಮತ್ತೇನೂ ಅಲ್ಲವೆಂದು ಹೇಳಬಹುದು. ಪ್ರಜೆಗಳೆಲ್ಲರೂ ನಮ್ಮ ಅಧೀನದಲ್ಲಿಯೇ ಇರಬೇಕೆಂದು, ಪ್ರಜೆಗಳೆಲ್ಲರೂ ನಮ್ಮ ಭಕ್ತರಾಗಿಯೇ ಇರಬೇಕೆಂಬ ಆಲೋಚನೆ ಯಿಂದ ಅದ್ವೈತರಿರುವುದರಿಂದ, ಈದಿನ ಪ್ರಜೆಗಳು ಸಾಯಿಬಾಬಾ ನನ್ನು ಆರಾಧಿಸುತ್ತಿದ್ದರೆ ಸಹಿಸಿಕೊಳ್ಳದೆ ಆತನು ದೇವರು ಅಲ್ಲವೆಂದು ಆರೋಪಿ ಸುತ್ತಿದ್ದಾರೆ. ಈ ದಿನ ಸಾಯಿಬಾಬಾನೆ ಅಲ್ಲ, ಗತ ಕಾಲದಲ್ಲಿ ಬುದ್ಧನನ್ನು ಹಿಂದೂ ಅಲ್ಲವೆಂದು ಹೊರಗಟ್ಟಿದ ಚರಿತ್ರೆ ಅದ್ವೈತರದೇಯೆಂದು ಮರೆತುಹೋಗ ಬಾರದು. ಗತ ಚರಿತ್ರೆಯನ್ನು ಅಗೆದು ನೋಡಿದರೆ ತಮ್ಮ ಮಾತನ್ನು ಕೇಳದವರನ್ನು, ತಮ್ಮ ಸಿದ್ಧಾಂತವನ್ನು ಆಚರಿಸದವರನ್ನು, ಹಿಂದೂಗಳಿಂದ ಬೇರ್ಪಡಿಸಿರುವು ದರಿಂದ, ಈ ದಿನ ಹಿಂದೂ ಮತ ಇತರ ಮತಗಳ ಮುಂದೆ ಚಿಕ್ಕದಾಗಿ ಹೋಗಿದೆ. ಹಿಂದೂಮತವನ್ನು ಸೀಳಿಸಿ ಬಲಹೀನಪಡಿಸುತ್ತಾ ಬಂದವರು ಅದ್ವೈತರೇ. ಇವರ ಮೂಲವಾಗಿಯೇ ಈದಿನ ಹಿಂದೂಮತವು ಪೂರ್ವದ ವೈಭವವನ್ನು ಕಳೆದುಕೊಂಡಿದೆ. ಈ ದಿನ ಸಹ ಸಾಯಿಯನ್ನು ಪೂಜಿಸುವವರು ಹಿಂದುಗಳೇ ಅಲ್ಲವೆನ್ನುವಂತೆ ಬೇರ್ಪಡಿಸಿ ಮಾತನಾಡುವು ದರಿಂದ ಹಿಂದೂಗಳೇ ನಷ್ಟಹೋಗುತ್ತೇವೆಂಬ ಧ್ಯಾಸವಿಲ್ಲದೆ ಕಾಷಾಯವಸ್ತ್ರಗಳು ಧರಿಸಿ 'ರಾಜರ್ಷಿ' ಎಂದು ಹೆಸರಿಟ್ಟುಕೊಂಡು 'ರಮಣಾನಂದ' ಎಂದು ಹೆಸರುಹೊಂದಿದ ಸ್ವಾಮಿಯನ್ನು ನಿನ್ನ ಗುರು ಪರಂಪರೆ ಏನು? ನೀನು ಗುರು ಹೇಗೆ ಆಗಿದ್ದೀಯಾ? ವೇದಗಳು, ಪುರಾಣಗಳು ಓದದವನು ನೀನು ಗುರು ಆಗಲಾರೆ ಎಂದು ವಾದಿಸುವುದು ಹಿಂದೂಗಳ ಸಂಖ್ಯೆಯನ್ನು ತಗ್ಗಿಸಿಕೊಂಡಂತೆ ಅಲ್ಲವೆ! ಎಂದು ಕೇಳುತ್ತಿದ್ದೇನೆ. ವೇದಗಳು ತಿಳಿದವರೇ, ವೇದಗಳು ಓದಿದವರೇ ಗುರುಗಳು,

ಉಳಿದವರು ಅಲ್ಲ ಎನ್ನುವುದರಲ್ಲಿ ನಾವು ಹೊರತು ಇತರರು ಗುರುಗಳಾಗಿ ಇರಬಾರದೆಂಬ ಅಸೂಯೆ ಕಾಣಿಸುತ್ತಿದೆ ಹೊರತು ಇತರೆ ಏನು ಇಲ್ಲವೆಂದು ಅರ್ಥವಾಗುತ್ತಿದೆ.

**ಪ್ರಶ್ನೆ :– (ಗೋವಿಂದಾನಂದ) ಒಬ್ಬ ಮುಸ್ಲಿಮ್‌ನನ್ನು ತಂದು ಈತನು ಗುರು ಎಂದರೇ ಶಾಸ್ತ್ರಗಳು ಒಪ್ಪಿಕೊಳ್ಳುವುದಿಲ್ಲ, ಎಂದರೇ ಯಾವ ಶಾಸ್ತ್ರವು ಒಪ್ಪಿಕೊಳ್ಳುವುದಿಲ್ಲ, ಎಷ್ಟು ಶಾಸ್ತ್ರಗಳು ಇವೆಯೆಂದು ರಮಣಾನಂದ ಕೇಳುವುದು ನಡೆದಿದೆ. ಆಗ ಗೋವಿಂದಾನಂದ ಅನೇಕ ಶಾಸ್ತ್ರಗಳಿವೆಯೆಂದು, ಯಾವುವು ಒಪ್ಪಿಕೊಳ್ಳುವುದಿಲ್ಲ ಎಂದು ಹೇಳುವುದಾಗಿದೆ.**

**ನನ್ನ ಉತ್ತರ :–** ಮನುಷ್ಯರನ್ನು ಒಂದೇ ವಿಧಾನವಾದ ಪ್ರಕೃತಿ ಧರ್ಮದಲ್ಲಿ ದೇವರು ಹುಟ್ಟಿಸಿದ್ದಾನೆ ಹೊರತು ಕುಲಕ್ಕೆ ಒಂದು ವಿಧಾನ, ಮತಕ್ಕೆ ಒಂದು ವಿಧಾನವನ್ನು ಏರ್ಪಡಿಸಿ ದೇವರು ಮನುಷ್ಯರನ್ನು ಹುಟ್ಟಿಸಲಿಲ್ಲ. ಮತದವನಾದರೂ ಗುರು ಆಗಬಹುದು. ಒಂದು ಮತದವನೇ ಗುರುವಾಗಿರಬೇಕೆಂದು ಯಾವ ಶಾಸ್ತ್ರದಲ್ಲಿಯೂ ದೇವರು ಹೇಳಲಿಲ್ಲ. ದೇವರು ಮನುಷ್ಯರೆಲ್ಲರಿಗೂ ಸಮಾನ. ಮನುಷ್ಯರೆಲ್ಲರಿಗೂ ದೇವರು ಸಮಾನ. ದೇವರು ಯಾರನ್ನು ನೀನು ಇಂತಹ ಮತಸ್ಥನೆಂದು ಹೇಳಿ ಹುಟ್ಟಿಸಲಿಲ್ಲ. ಮನುಷ್ಯ ಹುಟ್ಟಿದ ನಂತರ ಮತಗಳನ್ನು ತಯಾರು ಮಾಡಿಕೊಂಡಿದ್ದಾನೆ. ಮತ ಮನುಷ್ಯನ ಹಿರಿಮೆಯನ್ನಾಗಲಿ, ಹೀನತೆಯನ್ನಾಗಲಿ ತಿಳಿಸಲಿಲ್ಲ. ಮನುಷ್ಯನಲ್ಲಿನ ದೈವಜ್ಞಾನವನ್ನನುಸರಿಸಿ ಮನುಷ್ಯನಲ್ಲಿನ ದೊಡ್ಡತನ ಗುರುತಿಸಲ್ಪಡುತ್ತದೆ. ಮತವನ್ನನುಸರಿಸಿ ಜ್ಞಾನ ಇರುವುದಿಲ್ಲ. ಹಾಗೆ ಅಂದುಕೊಳ್ಳುವುದು ಅಜ್ಞಾನವಾಗುತ್ತದೆ ದೇವರು ಭೂಮಿಮೇಲೆ ಒಂದೇ ವಿಧವಾದ ಮನುಷ್ಯರನ್ನು ತಯಾರು ಮಾಡಿದ್ದಾನೆ. ಎಲ್ಲರಿಗೂ ಒಂದೇ ವಿಧವಾದ ಜ್ಞಾನವನ್ನು ಕೊಟ್ಟಿದ್ದಾನೆ. ದೇವರು ಎಲ್ಲರಿಗೂ ಒಬ್ಬನೇ ಎಂದು ಹೇಳಿದ್ದಾನೆ. ಅಭ್ಯಾಸವಾದ ಪದದಂತೆ ವೇದಗಳು, ಶಾಸ್ತ್ರಗಳು ಎಲ್ಲವುಗಳಿಗು ಪ್ರಮಾಣ ಎಂದು ಹೇಳುವವರು ಶಾಸ್ತ್ರಗಳು ಎಷ್ಟಿವೆ ಎಂದರೆ ಬಹಳ ಇವೆ ಎನ್ನುತ್ತೀರಾ? ವೇದಗಳು ನಾಲ್ಕು ಇವೆಯೆಂದು ಹೇಳುವವರು,

ಶಾಸ್ತ್ರಗಳು ಎಷ್ಟು ಇರುವುದು ಏಕೆ ಹೇಳುವುದಿಲ್ಲ? ಅವರಿಗೆ ಸರಿಹೋಗದ ಪ್ರತಿಯೊಂದಕ್ಕು ಶಾಸ್ತ್ರ ಒಪ್ಪಿಕೊಳ್ಳುವುದಿಲ್ಲ ಎನ್ನುವವರು ಯಾವ ಶಾಸ್ತ್ರ ಒಪ್ಪಿಕೊಳ್ಳುವುದಿಲ್ಲವೋ ಹೇಳಬಹುದಲ್ಲವೆ! ಏನೂ ತಿಳಿಯದ ಪ್ರಜೆಗಳನ್ನು ಯಾಮಾರಿಸುವುದಕ್ಕೆ ಪ್ರತಿಯೊಂದು ವಿಷಯದಲ್ಲಿಯೂ ಶಾಸ್ತ್ರ ಸಮ್ಮತಿಸುವುದಿಲ್ಲ ಎಂದು ಹೇಳುವುದು ಅಭ್ಯಾಸವಾಗಿದೆ. ಹಿಂದೂಗಳಲ್ಲಿಯೇ ಸ್ವಾಮಿಗಳಾಗಿರುವವರು ಹೀಗೆ ಶಾಸ್ತ್ರವನ್ನು ಗುಮ್ಮನಂತೆ ತೋರಿಸುತ್ತಾ ಪ್ರಜೆಗಳನ್ನು ತಪ್ಪುದಾರಿ ಹಿಡಿಸುತ್ತಿದ್ದಾರೆ. ಒಬ್ಬ ಮುಸ್ಲಿಮ್ ಮತಸ್ಥನು ಹಿಂದೂಗಳ ಜ್ಞಾನವನ್ನು ಹೇಳಬಾರದಾ? ಒಬ್ಬ ಹಿಂದೂ ಮುಸ್ಲಿಮ್‌ರಿಗೆ ಸಂಬಂಧಿಸಿದ ಖುರಾನ್ ಜ್ಞಾನವನ್ನು ಹೇಳಬಾರದಾ? ಈಗ ನಾನು ಮೂರು ಮತಗಳ ಜ್ಞಾನವನ್ನು ಹೇಳುತ್ತಿದ್ದೇನೆ. ಪ್ರಸ್ತುತ ಕಾಲದಲ್ಲಿ "ತ್ರಿಮತ ಏಕೈಕ ಗುರು"ವಾಗಿ ಪ್ರಕಟಿಸಿಕೊಂಡಿದ್ದೇನೆ. ಎಲ್ಲರೂ ನನ್ನನ್ನು **"ತ್ರಿಮತ ಗುರು"** ಅನ್ನುತ್ತಿದ್ದಾರೆ. ಆದರೆ ಅದ್ವೈತರು ಮಾತ್ರ ಅದು ಹೇಗಾಗುತ್ತದೆಂದು ತಡೆ ಹಾಕುತ್ತಾ ಶಾಸ್ತ್ರಗಳು ಒಪ್ಪಿಕೊಳ್ಳುವುದಿಲ್ಲ ಎಂದರೇ ಸರಿಹೋಗುತ್ತದಾ? ಯಾವ ಶಾಸ್ತ್ರ ಎಲ್ಲಿ ಒಪ್ಪಿಕೊಳ್ಳಲಿಲ್ಲವೋ ವಿವರವಾಗಿ ತೋರಿಸಬೇಕಾಗಿರುತ್ತದೆ. ಸಾಯಿಬಾಬಾ ಒಂದು ಮಾತನ್ನು **"ಸಬ್ ಕಾ ಮಾಲಿಕ್ ಏಕ್ ಹೈ"** ಎಂದು ಹೇಳಿದ್ದಾನೆ. ಅದರ ಅರ್ಥ "ಎಲ್ಲರಿಗೂ ಯಾಜಮಾನ ಒಬ್ಬನೇ" ಎಂದು ಆ ಮಾತನ್ನು ದೇವರು ಸಹ ಅಲ್ಲಗಳೆಯುವುದಿಲ್ಲ. 'ಎಲ್ಲರಿಗೂ ದೇವರು ಒಬ್ಬನೇ ಅಧಿಕಾರಿ' ಎಂಬ ಮಾತು ಸತ್ಯವೇ ಆಗಿರುವುದರಿಂದ ಯಾವ ಶಾಸ್ತ್ರ ಅದನ್ನು ಒಪ್ಪಿಕೊಳ್ಳುವುದಿಲ್ಲ ಎನ್ನುವುದಕ್ಕೆ ಅವಕಾಶವಿಲ್ಲ.

ಶಾಸ್ತ್ರಗಳ ವಿಷಯಕ್ಕೆ ಬಂದರೇ ಯಾವ ಪೂಜೆಯಾದರೂ ಭಕ್ತಿ ಮೇಲೆ ಆಧಾರಪಟ್ಟಿರುತ್ತದೆ ಹೊರತು ಶಾಸ್ತ್ರದ ಮೇಲೆ ಆಧಾರಪಟ್ಟಿರುವುದಿಲ್ಲ. ಆದರೆ ಪೂಜೆ ವಿಷಯದಲ್ಲಿಯೂ, ತಿನ್ನುವ ವಿಷಯದಲ್ಲಿಯೂ, ಮಲಗುವ ವಿಷದಲ್ಲಿಯೂ ಪ್ರತಿ ಕಾರ್ಯಕ್ಕು ಸಂಬಂಧಿಸಿದ ವಿಷಯದಲ್ಲಿಯೂ ಕೆಲವರು ಸ್ವಾಮಿಗಳು ಶಾಸ್ತ್ರವನ್ನು ಗುಮ್ಮನಂತೆ ತೋರಿಸುತ್ತಿದ್ದಾರೆ. ವಾಸ್ತವವಾಗಿ ಈ

ಕೆಲಸಗಳಿಗು ಶಾಸ್ತ್ರಕ್ಕು ಯಾವ ಸಂಬಂಧವಿಲ್ಲ. ಶಾಸ್ತ್ರದ ಹೆಸರು ಹೇಳಿ ಭಯ ಇಡುವವರಿಗೆ ನಿಜವಾಗಲು ಶಾಸ್ತ್ರಗಳು ಎಷ್ಟು ಇವೆಯೆಂಬ ವಿಷಯ ಸಹ ತಿಳಿದಿಲ್ಲ. ಪ್ರಪಂಚದಲ್ಲಿ ಇರುವುದು ಆರು ಶಾಸ್ತ್ರಗಳೇ ಇವೆ. ಅದರಲ್ಲಿ ನಾಲ್ಕು ಪ್ರಪಂಚ ಸಂಬಂಧವಾದವು. ಒಂದು ಸ್ವಲ್ಪ ಪ್ರಪಂಚಕ್ಕು ಸ್ವಲ್ಪ ಪರಮಾತಕ್ಕು ಸಂಬಂಧಿಸಿರುವುದಾಗಿದೆ. ಮತ್ತು ಆರನೇ ಶಾಸ್ತ್ರ ಪೂರ್ತಿ ದೇವರಿಗೆ ಸಂಬಂಧಿಸಿರುವುದಾಗಿದೆ. ಒಟ್ಟಾರೆ ಆರು ಶಾಸ್ತ್ರಗಳು ಕ್ರಮವಾಗಿ ಹೀಗೆ ಇವೆ. 1) ಗಣಿತ ಶಾಸ್ತ್ರ 2) ಖಗೋಳ ಶಾಸ್ತ್ರ 3) ರಸಾಯನ ಶಾಸ್ತ್ರ 4) ಭೌತಶಾಸ್ತ್ರ 5) ಜ್ಯೋತಿಷ್ಯ ಶಾಸ್ತ್ರ 6) ಬ್ರಹ್ಮವಿದ್ಯಾ ಶಾಸ್ತ್ರ. ಈ ಆರು ಶಾಸ್ತ್ರಗಳನ್ನು ಉಪಯೋಗಿಸಿ ಅವವುಗಳ ಕೆಲಸಗಳನ್ನು ಹೇಳಬಹುದು. ಏನಾದರೂ ಲೆಕ್ಕಗಳ ಅವಶ್ಯಕತೆಯಾದಾಗ ಗಣಿತ ಶಾಸ್ತ್ರವನ್ನು ನೋಡಬೇಕಾಗಿರುತ್ತದೆ. ಏನಾದರೂ ಶರೀರ ಸಂಬಂಧ ಅವಯವಗಳನ್ನು ಕುರಿತಾಗಲಿ ಆರೋಗ್ಯ ಅನಾರೊಗ್ಯ ವಿಷಯಗಳನ್ನು ಕುರಿತಾಗಲಿ ನೋಡಬೇಕಾಗಿ ಬಂದಾಗ ಭೌತ ಶಾಸ್ತ್ರವನ್ನು ನೋಡಬೇಕಾಗಿರುತ್ತದೆ. ಹಾಗೆ ನಾಲ್ಕು ಶಾಸ್ತ್ರಗಳು ಪೂರ್ತಿ ಪ್ರಪಂಚ ಸಂಬಂಧವಾದರೆ, ಕೇವಲ ಜ್ಯೋತಿಷ್ಯ ಶಾಸ್ತ್ರವೊಂದು ಸ್ವಲ್ಪ ಪ್ರಕೃತಿ, ಸ್ವಲ್ಪ ಪರಮಾತ್ಮ ಸಂಬಂಧ ಕರ್ಮ ವಿಷಯಗಳ ಮೇಲೆ ಆಧಾರಪಟ್ಟಿರುತ್ತದೆ. ಉಳಿದ ಆರನೇ ಶಾಸ್ತ್ರ ಪೂರ್ತಿ ದೈವಿಕವಾದ ಬ್ರಹ್ಮವಿದ್ಯಾ ಶಾಸ್ತ್ರವಾಗಿ ಹೇಳಲ್ಪಡುತ್ತಿದೆ.

ದೈವಿಕವಾದ ಮತ್ತು ದೈವಜ್ಞಾನ ಸಂಬಂಧವಾದ ವಿಷಯ ಯಾವುದಾದರೂ ಬ್ರಹ್ಮವಿದ್ಯಾಶಾಸ್ತ್ರವನ್ನು ಅನುಸರಿಸಿ ನಡೆಯಬೇಕಾಗಿರುತ್ತದೆ. ದೇಶದಲ್ಲಿ ಗಣಿತಶಾಸ್ತ್ರ ತಿಳಿದಿದೆ, ಖಗೋಳ ಶಾಸ್ತ್ರ ತಿಳಿದಿದೆ, ರಾಸಾಯನ ಶಾಸ್ತ್ರ ತಿಳಿದಿದೆ, ಹಾಗೆಯೇ ಭೌತ ಶಾಸ್ತ್ರದ ಬಗ್ಗೆಯೂ ಸಹ ತಿಳಿದಿದೆ. ಈ ಶಾಸ್ತ್ರಗಳನ್ನು ಕಲಿಸುವುದಕ್ಕೆ ದೊಡ್ಡ ದೊಡ್ಡ ವಿಶ್ವವಿದ್ಯಾಲಯಗಳೇ ಇವೆ. ಆದರೆ ದೈವಿಕವಾದ ಶಾಸ್ತ್ರ ಯಾವುದೋ ಬಹಳ ಜನರಿಗೆ ತಿಳಿದಿಲ್ಲ. ಬ್ರಹ್ಮವಿದ್ಯಾಶಾಸ್ತ್ರವಾದ ಭಗವದ್ಗೀತೆ ನಮ್ಮ ಮಧ್ಯದಲ್ಲಿದ್ದರೂ ಬಹಳ ಜನ ಸ್ವಾಮೀಜಿಗಳು ಅದನ್ನು ಗುರುತಿಸದೆ ವೇದಗಳನ್ನು ಹಿಡಿದುಕೊಂಡು ಅವುಗಳೆ ಜ್ಞಾನಸಂಬಂಧವಾದವು

ಗಳೆಂದು ಅಂದುಕೊಳ್ಳುತ್ತಿದ್ದಾರೆ. ವೇದಗಳಲ್ಲಿ ಜ್ಞಾನ ನಿರ್ಣಯ ಇಲ್ಲವೆಂದು, ಕರ್ಮವನ್ನು ಸುಡುವ ಜ್ಞಾನಾಗ್ನಿ ವೇದಗಳಲ್ಲಿ ಇಲ್ಲವೆಂದು ಬಹಳ ಜನರಿಗೆ ತಿಳಿದಿಲ್ಲ. ಜ್ಞಾನಸಂಬಂಧ ವಿಷಯಗಳಿಗೆಲ್ಲಾ, ಆರಾಧನೆಗಳಿಗೆಲ್ಲಾ ಈದಿನ ಸಾಯಿ ದೇವರಾ! ಅಲ್ಲವಾ? ಎಂಬ ವಿಷಯಕ್ಕು ಸಹ ಸರಿಯಾದ ದಾರಿಯನ್ನು ತೋರಿಸುವುದು ಭಗವದ್ಗೀತೆಯಾದ ಬ್ರಹ್ಮವಿದ್ಯಾಶಾಸ್ತ್ರವೇ. ಆದರೆ ಈದಿನ ಸ್ವಾಮೀಜಿಗಳಾಗಿರುವವರು ಸಹ ಭಗವದ್ಗೀತೆಗಿಂತ ಮೊದಲು ಹುಟ್ಟಿರುವವು, ಭಗವದ್ಗೀತೆಗಿಂತ ಮುಖ್ಯವಾದವು ವೇದಗಳು ಅನ್ನುತ್ತಿದ್ದಾರೆ. ಅಷ್ಟೇ ಅಲ್ಲದೆ ವೇದಗಳನ್ನು ಅನುಸರಿಸಿಯೇ ಭಕ್ತಿ ಮಾರ್ಗದಲ್ಲಿ ಮುಂದಕ್ಕೆ ಹೋಗಬೇಕೆಂದು ಅನ್ನುತ್ತಿದ್ದಾರೆ, ಎಲ್ಲದಕ್ಕು ಶಾಸ್ತ್ರವೇ ಆಧಾರ ಎನ್ನುವವರು ವೇದಗಳನ್ನು ತೋರಿಸುತ್ತಾ ಅವುಗಳನ್ನೇ ಶಾಸ್ತ್ರ ಎನ್ನುತ್ತಿದ್ದಾರೆ. ವೇದಕ್ಕೆ ಶಾಸ್ತ್ರ ವಿರುದ್ಧವಾದು ದೆಂದು, ಶಾಸ್ತ್ರಕ್ಕೆ ವೇದ ವಿರುದ್ಧವಾದುದೆಂದು, ಅವು ಒಂದಕ್ಕೊಂದು ಪರಸ್ಪರ ವಿರುದ್ಧವಾದವೆಂದು ತಿಳಿಯಲಾರದೆ ಹೋಗಿದ್ದಾರೆ. ಬ್ರಹ್ಮವಿದ್ಯಾ ಶಾಸ್ತ್ರ ಅನೇಕ ಸಂದರ್ಭಗಳಲ್ಲಿ ವೇದಗಳನ್ನು ಖಂಡಿಸಿದೆ. ವೇದಗಳಿಂದ ದೇವರು ತಿಳಿಯುವುದಿಲ್ಲವೆಂದು ಖಂಡಿಸಿ ಹೇಳಿದೆ. ಆದರೂ ಅದ್ವೈತರು ಕಣ್ಣುಮುಚ್ಚಿ ಕೊಂಡು ಅವರ ಅವಶ್ಯವನ್ನು ನೆರವೇರಿಸಿಕೊಳ್ಳುವುದಕ್ಕೆ ವೇದಗಳನ್ನು ಶ್ರೇಷ್ಠವಾದವೆಂದು ಅವುಗಳೇ ಶಾಸ್ತ್ರಗಳೆಂದು ಹೇಳುತ್ತಿದ್ದಾರೆ. ಅದು ಪೂರ್ತಿ ತಪ್ಪು.

**ಪ್ರಶ್ನ :– (ಗೋವಿಂದಾನಂದ) ಹೈಂದವದಲ್ಲಿ ಅನೇಕ ಶಾಸ್ತ್ರಗಳು ಇವೆ.**

**ನನ್ನ ಉತ್ತರ :–** ಹೈಂದವದಲ್ಲಾಗಲಿ, ಕ್ರೈಸ್ತದಲ್ಲಾಗಲಿ, ಇಸ್ಲಾಮ್‌ನಲ್ಲಾಗಲಿ ಮೂರು ಮತಗಳಲ್ಲಿ ಇರುವುದು ಮನುಷ್ಯರೇ. ಮನುಷ್ಯರಿಗೆ ಸಂಬಂಧಿಸಿದ ಶಾಸ್ತ್ರಗಳು ಸಾಮಾಜಿಕವಾಗಿ ಮತ್ತು ಆಧ್ಯಾತ್ಮಿಕವಾಗಿ ಕೆಲಸಕ್ಕೆ ಬರುವವು **"ಗಖರಭೌ ಜ್ಯೋಬ್ರ"** ಎನ್ನುವ ಶಾಸ್ತ್ರಗಳು ಹೊರತುಪಡಿಸಿ ಬೇರೆ ಇಲ್ಲ. ಸಂಸ್ಕೃತ ಕಲಿತುಕೊಳ್ಳುವವರಿಗೆ ಆ ಭಾಷೆಗೆ ಸಂಬಂಧಿಸಿದ ಶಾಸ್ತ್ರಗಳು ಸಹ ಇವೆ. ಅವು ವಿದ್ಯಾರ್ಥಿಗಳಿಗು, ವಿಧ್ವಾಂಸರಿಗು ಹೊರತು ಇತರೆ ಮನುಷ್ಯರಿಗೆ ಕೆಲಸಕ್ಕೆ

ಬರುವುದಿಲ್ಲ. ಇವು ಉಚ್ಚಾರಣೆಗೆ ಹೊರತು ಅನುಭವಕ್ಕೆ ಕೆಲಸಕ್ಕೆ ಬಾರದ ಶಾಸ್ತ್ರಗಳಾಗಿವೆ. ಅವುಗಳನ್ನು ಕ್ರಮವಾಗಿ ಹೇಳಿದರೆ 1) ತರ್ಕ 2) ವ್ಯಾಕರಣ 3) ಧರ್ಮ 4) ಮೀಮಾಂಸೆ 5) ವೈದ್ಯ 6) ಜ್ಯೋತಿಷ್ಯ ಎಂದು ಹೇಳಬಹುದು. ನಾನು ಮನುಷ್ಯರೆಲ್ಲರಿಗೂ ಕೆಲಸಕ್ಕೆ ಬರುವ ಆರು ಶಾಸ್ತ್ರಗಳನ್ನು ಹೇಳಿದರೆ, ಎಲ್ಲರಿಗೂ ಕೆಲಸಕ್ಕೆ ಬರದಿರುವವು ವಿದ್ಯೆಯನ್ನು ಕಲಿತಿದ್ದೇವೆ, ನಮಗೆ ಶಾಸ್ತ್ರಗಳು ತಿಳಿದಿವೆ ಎಂದು ಹೇಳಿಕೊಳ್ಳುವುದಕ್ಕೆ ಕೆಲಸಕ್ಕೆ ಬರುವ ಆರು ಶಾಸ್ತ್ರಗಳನ್ನು ಹೇಳುತ್ತಿದ್ದಾರೆ. ನಾವು ಈಗ ಅವುಗಳನ್ನು ಹೇಳದೆಹೋದರೆ ನಮ್ಮನ್ನು ಅವಿದ್ಯಾವಂತನು ಎಂದು ಆರೋಪಿಸುವುದಕ್ಕೆ ಅವಕಾಶವಿರುತ್ತದೆ. ಆದಾದ್ದರಿಂದ ಯಾರಿಗೂ ತಿಳಿಯದ, ಎಲ್ಲರಿಗೂ ಉಪಯೋಗಪಡದ ಶಾಸ್ತ್ರಗಳ ವಿವರವನ್ನು ಹೇಳುತ್ತಿದ್ದೇನೆ ನೋಡಿರಿ. ಸ್ವಾಮಿಗಳು! ವಿಧ್ವಾಂಸರು! ಆರು ಶಾಸ್ತ್ರಗಳನ್ನು ಕ್ರಮವಾಗಿ ಮೇಲೆ ಹೇಳಿದ್ದೇವೆ. ಈಗ ಅವುಗಳಿಗೆ ಒಂದೊಂದಕ್ಕು ಇರುವ ವಿವರವನ್ನು ಹೇಳುತ್ತೇನೆ ನೋಡಿರಿ.

**1) ತರ್ಕ :–** ತರ್ಕ ಎಂದರೇ ಊಹೆ, ಅಧ್ಯಾಹಾರ, ಕಾರಣ, ಕೋರಿಕೆ. ಆರು ಶಾಸ್ತ್ರಗಳಲ್ಲಿ ಮೊದಲ ಶಾಸ್ತ್ರವಾಗಿ ಹೇಳಲ್ಪಡುವ ತರ್ಕದಲ್ಲಿರುವ ಅಂಶಗಳು (ಭಾಗಗಳು) ಈಗ ಹೇಳಿದ್ದೇವೆ ಅಲ್ಲವೆ! ನೀವು ಸ್ವಲ್ಪ ಆಲೋಚಿಸಿರಿ. 'ಊಹೆ' ಎನ್ನುವುದು ಯಾರಾದರೂ ಶಾಸ್ತ್ರವೆಂದು ಒಪ್ಪಿಕೊಳ್ಳುತ್ತಾರಾ? ಕಾರಣ ಕೇಳುವುದು 'ತರ್ಕ' ಎಂಬ ಪದಕ್ಕೆ ಸರಿಹೋಗುತ್ತದೆ ಆದರೆ ಅದನ್ನು ಶಾಸ್ತ್ರ ಎಂದರೇ ಸರಿಹೋಗುತ್ತದಾ? ಹಾಗೆಯೇ 'ತರ್ಕ' ಎಂದರೇ 'ಕೋರಿಕೆ' ಎಂದೂ ಸಹ ಇದೆ. ಕೋರಿಕೆಗಳೆಲ್ಲ ಶಾಸ್ತ್ರಗಳಾದರೆ, ಊಹೆಗಳೆಲ್ಲ ಶಾಸ್ತ್ರಗಳಾದರೆ ಶಾಸ್ತ್ರಗಳಿಗೆ ಅಂತ್ಯ ಇರುವುದಿಲ್ಲ, ಯಾರ ಇಷ್ಟಬಂದಂತೆ, ಯಾರ ಕೋರಿಕೆ ಪ್ರಕಾರ ಅವರು ನಮ್ಮದು ಶಾಸ್ತ್ರ ಎಂದು ಹೇಳಬಹುದು. ಯಾರ ಊಹೆ ಅವನಿಗೆ ಶಾಸ್ತ್ರವಾದರೆ ಶಾಸ್ತ್ರಗಳಿಗೆ ಪರಿಮಿತಿಯಿಲ್ಲ. ಏನನ್ನಾದರೂ ಶಾಸ್ತ್ರ ಎನ್ನಬಹುದು. ಆಗ ಶಾಸ್ತ್ರಬದ್ಧತೆ ಎಂಬುದಕ್ಕೆ ಅರ್ಥವೇ ಇರುವುದಿಲ್ಲ. ಒಬ್ಬನು ಇಂದ್ರ ಸಭೆಯಲ್ಲಿನ ರಂಭೆಯನ್ನು ಮದುವೆ ಮಾಡಿಕೊಂಡಂತೆ ಊಹಿಸಿಕೊಂಡು ನಾನು ಹೇಳುವುದು ಶಾಸ್ತ್ರ

ರಂಭೆ ನನ್ನ ಪತ್ನಿ ಎಂದರೇ ಸರಿಹೋಗುತ್ತದಾ? ಅವರು ಹೇಳುವ ಮೊದಲ ಶಾಸ್ತ್ರ ತರ್ಕ ಹೇಗಿದೆಯೋ ಗಮನಿಸಿದ್ದೀರಾ? ನಾವು ಹೇಳುವ ಮೊದಲ ಶಾಸ್ತ್ರ ಗಣಿತ. ಮೂರನ್ನು ಮೂರರೊಂದಿಗೆ ಗುಣಿಸಿದರೆ ಯಾರಿಗಾದರೂ ಒಂಭತ್ತೇ ಬರುತ್ತದೆ. 3X3=9 ಇದು ಶಾಸನದಿಂದ ಕೂಡಿಕೊಂಡ ಶಾಸ್ತ್ರ. ಆದುದರಿಂದ ಅಮೇರಿಕಾದಲ್ಲಿ ಗುಣಿಸಿದರೂ, ಆಫ್ರಿಕಾದಲ್ಲಿ ಗುಣಿಸಿದರೂ, ಆಕಾಶದಲ್ಲಿ ಗುಣಸಿದರೂ, ಭೂಮಿಮೇಲೆ ಗುಣಿಸಿದರೂ ಒಂದೇ ವಿಧವಾದ ಉತ್ತರ ಇರುತ್ತದೆ. ಶಾಸ್ತ್ರ ಎಂದರೇ ಶಾಸನವಾಗಿ ಇರುವುದೆ ಹೊರತು ಬದಲಾಗುವುದಲ್ಲ.

**2) ವ್ಯಾಕರಣ :–** ಇದು ಎರಡನೆ ಶಾಸ್ತ್ರ ಇದು ಕೇವಲ ಶಬ್ಧ ಶಾಸ್ತ್ರವೆಂದು ಹೇಳುತ್ತಿದ್ದಾರೆ. ವ್ಯಾಸರು ಹೇಗೆ ವೇದಗಳ ಮಂತ್ರಗಳನ್ನು ಹೇಳಿದ್ದಾರೋ ಹಾಗೆ ಹೇಳುವುದು ವ್ಯಾಸಶಾಸ್ತ್ರ ಎಂದು ಅನ್ನುತ್ತಾರೆ. ವೇದಗಳನ್ನು ಕೆಲವರು ಬೇರೆ ಬೇರೆ ವಿಧಾನಗಳಲ್ಲಿ ಹೇಳುತ್ತಿರುವುದರಿಂದ ಅವರ ವ್ಯಾಕರಣವೆಂದು ಅನ್ನುತ್ತಿದ್ದರು. ಹೀಗೆ ವ್ಯಾಕರಣ ಎರಡನೆ ಶಾಸ್ತ್ರವಾದರೆ ಅದು ಶಬ್ಧ ಶಾಸ್ತ್ರವಾಗಿ ಹೋಗಿದೆ. ಶಬ್ಧವನ್ನು ಶಾಸ್ತ್ರವೆಂದರೇ ಶಾಸ್ತ್ರಕ್ಕಿರುವ ಬೆಲೆ ಪೂರ್ತಿಯಾಗಿ ಹೋಗುತ್ತದೆ. ಇನ್ನು ಮೂರನೆ ಶಾಸ್ತ್ರವನ್ನು ನೋಡೋಣ.

**3) ಧರ್ಮ ;–** ಈ 'ಧರ್ಮ' ಎನ್ನುವ ಶಾಸ್ತ್ರದಲ್ಲಿ ಒಂಭತ್ತು ಅಂಶಗಳಿವೆ. ಅವುಗಳನ್ನು ಕ್ರಮವಾಗಿ ಹೇಳಿದರೆ 1) ಪುಣ್ಯ 2) ನ್ಯಾಯ 3) ಸಾಮ್ಯ 4) ಸ್ವಭಾವ 5) ಆಚಾರ 6) ಅಹಿಂಸೆ 7) ವೇದೋಕ್ತ ವಿಧಿ 8) ಉಪನಿಷತ್ತು 9) ಯಜ್ಞ. ಇವರು ಬರೆದಿಟ್ಟಿರುವವುಗಳನ್ನು ನೋಡಿದರೆ ನಾವೇ ಅಜ್ಞಾನಿಗಳಾ ಎಂದು ಹಿಂತಿರುಗಿ ನೋಡಿಕೊಳ್ಳಬೇಕಾದ ಅವಶ್ಯಕತೆ ಏರ್ಪಡುತ್ತಿದೆ. ಹಾಗೆ ನೋಡಿಕೊಂಡರೆ ನಾವು ಹೇಳಿರುವುದು ಸತ್ಯ, ಅವರು ಹೇಳಿರುವುದು ಅಸತ್ಯವೆಂದು ತಿಳಿದುಹೋಗುತ್ತದೆ. ನಾವು ಜ್ಞಾನಬೋಧನೆಗಳು ಹೇಳುವಾಗ ಅನೇಕಬಾರಿ ಜ್ಞಾನ, ಧರ್ಮ ದೈವ ಸಂಬಂಧವಾದುದೆಂದು, ನೀತಿ, ನ್ಯಾಯ ಪ್ರಪಂಚ ಸಂಬಂಧವಾದುದೆಂದು ಹೇಳಿದ್ದೇವೆ. ಇಲ್ಲಿ ನೋಡಿದರೆ ಧರ್ಮವೇ

ನ್ಯಾಯವೆಂದು ಹೇಳುವುದು ಪೂರ್ತಿ ವಿಡ್ಡೂರವಾಗಿದೆ. ಪ್ರಪಂಚ ಸಂಬಂಧವಾದ ನೀತಿಯಾದ ಅಹಿಂಸೆಯನ್ನು ಧರ್ಮವಾಗಿ ಹೇಳಿದರೆ, ಕೃಷ್ಣನು ಅರ್ಜುನನಿಗೆ ಯುದ್ಧ ಮಾಡೆಂದು ಹೇಳುವುದು ಹಿಂಸೆಯನ್ನು ಪ್ರೋತ್ಸಹಿಸಿದಂತಾಗುತ್ತದೆ. ಅದರ ಪ್ರಕಾರ ಕೃಷ್ಣನು ಅರ್ಜುನನಿಗೆ 'ಅಹಿಂಸೆ' ಎಂಬ ಧರ್ಮವನ್ನು ಅಲ್ಲದೆ, 'ಹಿಂಸೆ' ಎಂಬ ಅಧರ್ಮವನ್ನು ಬೋಧಿಸಿದ್ದಾನೆಂದು ಹೇಳಬಹುದು. ಭಗವದ್ಗೀತೆ ಸರ್ವಮಾನವರಿಗೂ ಧರ್ಮಶಾಸ್ತ್ರವೆಂದು ಹೇಳದಂತೆ ಅಧರ್ಮಶಾಸ್ತ್ರವೆಂದು ಹೇಳಬೇಕಾಗಿಬರುತ್ತದೆ. ಹಾಗೆಯೇ ಭಗವದ್ಗೀತೆಯಲ್ಲಿ ವೇದಗಳಿಗೆ ವಿರೋಧ ಇರುವಾಗ ಧರ್ಮ ಎಂದರೇ ವೇದೋಕ್ತ ವಿಧಿ ಎಂದು ಹೇಳಿದರೆ, ಅದು ಭಗವದ್ಗೀತೆ ಜ್ಞಾನಕ್ಕೇ ವಿರುದ್ಧವಾದ ಜ್ಞಾನವಾಗುತ್ತದೆ. ಹೀಗೆ ಹೇಳುತ್ತಾ ಹೋದರೆ ಅವೆಲ್ಲವೂ ಅವಕ ತವಕ ಅಸಂಬದ್ಧತ ಶಾಸ್ತ್ರಗಳೆ ಇವೆ.

**4) ಮೀಮಾಂಸ :–** ಮೀಮಾಂಸ ಎಂದರೇ ಕರ್ಮ ಬ್ರಹ್ಮ ಪ್ರತಿ ಪಾದಕ ಶಾಸ್ತ್ರ ಎಂದು ಹೇಳುತ್ತಾರೆ. ಇದು ಎಂತಹ ಶಾಸ್ತ್ರವೋ ಹೇಳುವವರಿಗೇ ತಿಳಿಯುತ್ತದೆ.

**5) ವೈದ್ಯ :–** ವೈದ್ಯ ಎಂದರೇ ರೋಗ ಚಿಕಿತ್ಸಾ ಶಾಸ್ತ್ರ ಎಂದು ಹೇಳುತ್ತಾರೆ. ವೈದ್ಯ ಎಂದಿಗೂ ಶಾಸ್ತ್ರ ಸಂಬಂಧವಾದುದು ಅಲ್ಲ. ರೋಗವನ್ನು ಅನುಸರಿಸಿ ಚಿಕಿತ್ಸೆ ಬದಲಾಗುತ್ತದೆ. ಹಾಗೆ ಸ್ಥಳವನ್ನನುಸರಿಸಿ ಚಿಕಿತ್ಸೆ ಬದಲಾಗುತ್ತದೆ. ಸಮುದ್ರದ ಮೇಲೆ ಕೊಟ್ಟಿರುವ ಔಷಧಿಯನ್ನು ಭೂಮಿಮೇಲೆ ಕೊಟ್ಟರೆ ಅದು ಕೆಲಸ ಮಾಡುವುದಿಲ್ಲ. ಚಿಕಿತ್ಸೆ ಕಲಿತುಕೊಂಡಿರುವುದನ್ನನುಸರಿಸಿ, ಓದಿಕೊಂಡಿರುವುದನ್ನನುಸರಿಸಿ ಇರುವುದಿಲ್ಲ. ಚಿಕಿತ್ಸೆ ರೋಗವನ್ನನುಸರಿಸಿ, ರೋಗಿವೊಂದರ ಮನೋಭಾವನೆಯನ್ನನುಸರಿಸಿ ಬದಲಾಗುತ್ತಿರುತ್ತದೆ. ಚಿಕಿತ್ಸೆ ಎಲ್ಲವೂ ಸಮಯಸ್ಫೂರ್ತಿ ಮೇಲೆ ಆಧಾರಪಟ್ಟಿರುತ್ತದೆ. ಆದುದರಿಂದ ಚಿಕಿತ್ಸೆಯನ್ನು ಶಾಸ್ತ್ರವೆಂದು ಹೇಳುವುದಕ್ಕೆ ಎಲ್ಲಾ ವಿಧಗಳಲ್ಲಿ ಸರಿಹೋಗುವುದಿಲ್ಲ.

**6) ಜ್ಯೋತಿಷ್ಯ :–** ಜ್ಯೋತಿಷ್ಯ ಎಂದರೇ ನಡೆಯುವಂತಹ ಭವಿಷ್ಯತ್ತನ್ನು ಕುರಿತು ಹೇಳುವುದು ಇಷ್ಟಕ್ಕೆಮುನ್ನ ನಾವು ಹೇಳಿದ ಆರು ಶಾಸ್ತ್ರಗಳಲ್ಲಿ ಜ್ಯೋತಿಷ್ಯ

ಐದನೆ ಶಾಸ್ತ್ರವಾಗಿದೆ. ಜ್ಯೋತಿಷ್ಯ ಶಾಸ್ತ್ರವೇ ಆದರೂ ಅದರಲ್ಲಿ ಪೂರ್ತಿ ಪರಿಶೋಧನೆ ನಡೆಯಲಿಲ್ಲ. ಆದುದರಿಂದ ಜ್ಯೋತಿಷ್ಯ ಇಂದು ಪೂರ್ತಿ ತಿಳಿಯದ ಶಾಸ್ತ್ರವಾಗಿದೆ. ನೀವು ಹೇಳಿದ ಆರು ಶಾಸ್ತ್ರಗಳಲ್ಲಿ ಜ್ಯೋತಿಷ್ಯವೊಂದನ್ನು ಶಾಸ್ತ್ರವೆಂದು ನಾವು ಒಪ್ಪಿಕೊಳ್ಳುತ್ತಿದ್ದೇವೆ. ಉಳಿದ ಐದು ಶಾಸ್ತ್ರಗಳು ಅಲ್ಲವೆಂದು ಹೇಳುತ್ತಿದ್ದೇವೆ.

**ಪ್ರಶ್ನೆ :– (ಬಂಗಾರಯ್ಯ – ಶಂಕರಾಚಾರ್ಯ ಭಕ್ತರು) ವೇದಗಳಲ್ಲಿ ಆಚಾರ ವ್ಯವಹಾರಗಳಿವೆ ಅವುಗಳನ್ನು ನೀವು ಅನುಸರಿಸುತ್ತಿದ್ದೀರಾ?**

**ನನ್ನ ಉತ್ತರ :–** ವೇದಗಳಲ್ಲಿ ಆಚಾರ ವ್ಯವಹಾರಗಳು ಯಾರಿಗೆ ಕೆಲಸಕ್ಕೆ ಬರುತ್ತವೋ ನೀವೆ ಹೇಳಿರಿ. ಯಾವುದೆ ಬೇರೆ ಕೆಲಸವಿಲ್ಲದೆ ಆರಾಧನೆಗಳು ನಿತ್ಯ ಕೃತ್ಯಗಳಾಗಿರುವವರಿಗೆ ವೇದಗಳಲ್ಲಿನ ಆಚಾರ ವ್ಯವಹಾರಗಳು ಸರಿಹೋಗುತ್ತವೆ ಆದರೆ, ಸಾಮಾನ್ಯ ಪ್ರಜೆಗಳಿಗೆ ವೇದಗಳು, ಆಚಾರ ವ್ಯವಹಾರಗಳು ಕೆಲಸಕ್ಕೆ ಬರುವುದಿಲ್ಲ ಅಲ್ಲವೆ! ಆದುದರಿಂದ ಪುರೋಹಿತರಾದ ಬ್ರಾಹ್ಮಣರಿಗೆ, ನಿತ್ಯ ಆರಾಧಕರಿಗೆ ಮಾತ್ರವೇ ವೇದಗಳು, ವೇದ ವ್ಯವಹಾರಗಳು ಕೆಲಸಕ್ಕೆ ಬರುತ್ತವೆಯೆಂದು ಅಂದುಕೊಳ್ಳುತ್ತಿದ್ದೇನೆ.

**ಪ್ರಶ್ನೆ :– (ರವಿ ಶಂಕರ ಅವಧಾನಿ. ಮಹಾನಂದಿ ದೇವಸ್ಥಾನದ ವೇದಪಂಡಿತರು) ವೇದಗಳನ್ನು ಕುರಿತು ನಿಮಗೆ ಏನು ತಿಳಿದಿದೆ?**

**ನನ್ನ ಉತ್ತರ :–** ವೇದಪಂಡಿತರಿಗೆ ವೇದಗಳು ಹೊರತು ಇತರೆಗಳು ಏನು ತಿಳಿದಿಲ್ಲ. ಆದ್ದರಿಂದ ವೇದಗಳನ್ನು ಹೊಗಳುವುದೇ ಅವರ ಕೆಲಸವಾಗಿರುತ್ತದೆ. ಬಾವಿಯಲ್ಲಿ ಇಳಿದವನಿಗೆ ಬಾವಿಯಲ್ಲಿರುವ ಮೇಲಿನ ಭಾಗ ಮಾತ್ರವೇ ಕಾಣಿಸುವಂತೆ ಉಳಿದ ಪ್ರಪಂಚ ಏನು ಕಾಣಿಸದಂತೆ ವೇದಗಳಲ್ಲಿ ಬಿದ್ದವರಿಗೆ ವೇದಗಳೇ ದೊಡ್ಡದಾಗಿ ಕಾಣಿಸುತ್ತಿರುತ್ತವೆ. ಆದ್ದರಿಂದ ತಮಗೆ ತಿಳಿದಷ್ಟು ಉಳಿದವರಿಗೆ ತಿಳಿದಿಲ್ಲವೆಂದು ಹೇಳುವುದು ಸಹಜವಾಗಿರುತ್ತದೆ. ಅದರ ಪ್ರಕಾರವೇ ವೇದಗಳನ್ನು ಕುರಿತು ನಿಮಗೆ ಏನು ತಿಳಿದಿದೆ? ಎಂದು ಅವರು ಪ್ರಶ್ನಿಸುವುದಾಗಿದೆ.

ಅದಕ್ಕೆ ನಮಗೆ ತಿಳಿದಿರುವುದು ನಾವು ಹೇಳುತ್ತಿದ್ದೇವೆ. ಮೊದಲು ವ್ಯಾಸನು ವೇದಗಳನ್ನು ರಚಿಸಿದ್ದಾನೆ. ವೇದಗಳೊಂದಿಗೆ ಉಪನಿಷತ್ತುಗಳನ್ನು ಬರೆದ ವ್ಯಾಸನು ಅವು ಅಲ್ಲದೆ ಪುರಾಣಗಳನ್ನು ಬರೆದಿದ್ದಾನೆ. ನಾಲ್ಕು ವೇದಗಳನ್ನು, ಪುರಾಣಗಳನ್ನು, ಉಪನಿಷತ್ತುಗಳನ್ನು ಬರೆದ ವ್ಯಾಸನು ಪ್ರಜೆಗಳಿಂದ ದೊಡ್ಡವನೆನಿಸಿಕೊಂಡಿದ್ದಾನೆ. ಆದರೂ ವ್ಯಾಸನ ಮೆದುಳಿನಲ್ಲಿ ತನಗೆ ಸಂಪೂರ್ಣವಾದ ಜ್ಞಾನ ಇಲ್ಲವೆಂಬ ದಿಗುಲು ಇತ್ತು. ತನಗೆ ಸಂಪೂರ್ಣ ಜ್ಞಾನ ಬೇಕೆಂದು, ದೇವರನ್ನು ನಿತ್ಯ ಕೋರಿಕೊಳ್ಳುತ್ತಿದ್ದನು. ವ್ಯಾಸನು ಪಟ್ಟ ಬಾಧೆಯನ್ನು ಕುರಿತು ತಿಳಿದರೆ ವೇದಗಳಿಂದ ಮನುಷ್ಯನಲ್ಲಿ ಸಂಪೂರ್ಣ ಜ್ಞಾನಿ ಎಂಬ ತೃಪ್ತಿ ಉಂಟಾಗುವುದಿಲ್ಲ ಎಂದು ತಿಳಿಯುತ್ತಿದೆ. ಅದರಿಂದ ವೇದಗಳು ಸಹ ಪ್ರಪಂಚ ವಿದ್ಯೆಗೆ ಸಮಾನವೆಂದೇ ತಿಳಿಯುತ್ತಿವೆ. 'ಕಾಗೆ ಮರಿ ಕಾಗೆಗೆ ಮುದ್ದು' ಎನ್ನುವಂತೆ ವೇದಪಂಡಿತರಿಗೆ ವೇದಗಳೇ ಮುದ್ದಾಗಿ, ದೊಡ್ಡದಾಗಿ ಕಾಣಿಸುತ್ತಿರುತ್ತವೆ. ನಾವು ವೇದಪಂಡಿತರಲ್ಲ, ಆದುದರಿಂದ ಅವು ಮುದ್ದಾಗಾಗಲಿ, ದೊಡ್ಡದಾಗಾಗಲಿ ನಮಗೆ ಕಾಣಿಸಲಿಲ್ಲ.

ವೇದಗಳನ್ನು ಬರೆದ ವೇದ ವ್ಯಾಸನಿಗೇ ವೇದಗಳು ದೊಡ್ಡದಾಗಿ ಕಾಣಿಸಲಿಲ್ಲ. ಆದ್ದರಿಂದ ಜ್ಞಾನಕ್ಕೋಸ್ಕರ ಅನ್ವೇಷಣೆ ಮಾಡುವುದು ನಡೆದಿದೆ. ಕೊನೆಗೆ ಜ್ಞಾನವನ್ನು ಹೊಂದಿ ತೃಪ್ತಿ ಹೊಂದುವುದು ಸಹ ನಡೆದಿದೆ. **ಕೃಷ್ಣ ಭಗವಾನನು ಯುದ್ಧರಂಗದಲ್ಲಿ ಅರ್ಜುನನಿಗೆ ಆತ್ಮಜ್ಞಾನವನ್ನು ತಿಳಿಸಿದಾಗ, ನಂತರ ಅರ್ಜುನನು ಆ ವಿಷಯಗಳೆಲ್ಲವೂ ಮಣಿ ಪೋಣಿಸಿದಂತೆ ವ್ಯಾಸನಿಗೆ ತಿಳಿಸುವುದಾಗಿದೆ. ಅಲ್ಲಿಯವರೆಗು ಯಾವ ಜ್ಞಾನಕ್ಕಾಗಿ ಕಾದು ನೋಡುತ್ತಿದ್ದಾನೋ ಆಗ ಅದೇ ಜ್ಞಾನವೇ ಆತನಿಗೆ ದೊರೆತಂತಾಗಿದೆ. ಕೃಷ್ಣನು ಹೇಳಿದ ಜ್ಞಾನವೆಲ್ಲವನ್ನು ಅರ್ಜುನನ ಮೂಲಕ ಕೇಳಿದ ವ್ಯಾಸನು ತನಗೆ ತಿಳಿದ ಜ್ಞಾನವೆಲ್ಲವನ್ನು ಯಾವುದೂ ಬಿಡದಂತೆ ಗ್ರಂಥರೂಪ ಮಾಡಿದ್ದಾನೆ.** ಆಗ ವ್ಯಾಸನಿಂದ ತಯಾರಾದ ಗ್ರಂಥವೇ **'ಭಗವದ್ಗೀತೆ'**ಯಾಗಿ ಹೇಳಲಾಗಿದೆ. ವ್ಯಾಸನು ಬರೆದ ವೇದಗಳೂ ಇವೆ, ಅದೇ ವ್ಯಾಸನು ಬರೆದ ಭಗವದ್ಗೀತೆ ಸಹ ಇದೆ. ಇದೆಲ್ಲವೂ ನಮಗೆ ಸ್ವಲ್ಪ ತಿಳಿದು ಸ್ವಲ್ಪ ತಿಳಿಯದೆ ನಡೆದುಹೋಗಿದೆ. ನನಗೆ ತಿಳಿದಿರುವುದೇನೆಂದರೇ!

ಅರ್ಜುನನ ಮುಖಾಂತರ ಭಗವದ್ಗೀತೆಯನ್ನು ಕೇಳಿದ ವ್ಯಾಸನು ಭಗವದ್ಗೀತೆಯಲ್ಲಿ ಅಧರ್ಮಗಳಾಗಿ ಹೇಳಲಾದ ವೇದಗಳನ್ನು ಕುರಿತು, ಯಜ್ಞಗಳನ್ನು ಕುರಿತು ಬರೆಯುವುದು ದೊಡ್ಡ ತಪ್ಪು ಮಾಡಿದಂತಾಗಿದೆಯೆಂದು ತಿಳಿದು, ಅದರಿಂದ ಎಷ್ಟೋ ಜನರನ್ನು ಯಜ್ಞಗಳು ಮಾಡುವವರಾಗಿ, ವೇದಗಳು ಓದುವವರನ್ನಾಗಿ ಪ್ರೇರೆಪಿಸಿದ್ದಕ್ಕೆ ತನಗೆ ತಪ್ಪದೆ ಪಾಪ ಬರುತ್ತದೆಂದು ತಿಳಿದು ಅಂತಹ ಕರ್ಮದಿಂದ ಹೊರಬೀಳುವುದಕ್ಕಾಗಿ ಭಗವದ್ಗೀತೆಯನ್ನು ಬರೆಯ ಬೇಕೆಂದುಕೊಂಡಿದ್ದಾನೆ. ಆ ದಿನ ಚಂದೋಬದ್ಧವಾಗಿ ಶ್ಲೋಕಗಳನ್ನು ಬರೆಯುವುದು ಒಬ್ಬ ವ್ಯಾಸನಿಗೆ ಮಾತ್ರ ಬರುವುದರಿಂದ ಆತನ ಮುಖಾಂತರವೇ ಭಗವದ್ಗೀತೆ ಗ್ರಂಥ ತಯಾರಾಗಿದೆ. ಭಗವದ್ಗೀತಾ ಗ್ರಂಥವನ್ನು ಬರೆಯುವುದರಿಂದ ತನಗೆ ಏರ್ಪಟ್ಟ ಜ್ಞಾನಶಕ್ತಿಯಿಂದ ವೇದಗಳನ್ನು, ಪುರಾಣಗಳನ್ನು ಬರೆದಿದ್ದಕ್ಕೆ ಬಂದಿರುವ ಕರ್ಮವೆಲ್ಲವೂ ಸುಟ್ಟು ಹೋಗಿದೆಯೆಂದು ವ್ಯಾಸನು ಸಂತೋಷ ಪಟ್ಟಿದ್ದಾನೆ. ಭಗವದ್ಗೀತೆ ತಿಳಿಯದ ಮುನ್ನ ವೇದಗಳೇ ದೊಡ್ಡವೆಂದು ತಿಳಿದ ವ್ಯಾಸನು, ಭಗವದ್ಗೀತೆ ತಿಳಿದ ನಂತರ ತಾನು ಮಾಡಿದ ಕೆಲಸ ಪಾಪದ ಕೆಲಸವೆಂದು ತಿಳಿದಿದ್ದಾನೆ.

ಆ ದಿನ ವ್ಯಾಸನು ಅನುಭವಿಸಿದ ವೇದನೆ ತಿಳಿಯದ ಈಗಿನ ವೇದ ಪಂಡಿತರು ವೇದಗಳನ್ನು ತಿಳಿದ ತಾವೇ ದೊಡ್ಡವರೆಂದು ಅಂದುಕೊಳ್ಳುವುದು ನಡೆಯುತ್ತದೆ. ಆದ್ದರಿಂದ ಗರ್ವದಿಂದ ವೇದಗಳ ಬಗ್ಗೆ ನಿಮಗೆ ಏನು ತಿಳಿದಿದೆ? ಎಂದು ಕೇಳುವುದಾಗಿದೆ. ನಮಗೆ ವೇದಗಳೇ ಮಾಯೆಯೆಂದು ತಿಳಿಯುವು ದರಿಂದ ಈಗಿನಿಂದಾದರೂ ನೀವು ಕಣ್ತೆರೆದು ನೋಡಿರೆಂದು ಈ ವಿಷಯವನ್ನು ತಿಳಿಸುತ್ತಿದ್ದೇವೆ. ಈಗಲಾದರೂ ಸತ್ಯವನ್ನು ಗ್ರಹಿಸಿ ಭಗವದ್ಗೀತೆಯಲ್ಲಿ ಸಾಂಖ್ಯ ಯೋಗದಲ್ಲಿರುವ 45ನೇ ಶ್ಲೋಕ ಹೇಳಿದ **"ತ್ರೈ ಗುಣ್ಯ ವಿಷಯಾ ವೇದಾ"** ಎಂಬ ವಿಷಯವನ್ನು ಮರೆಯಬಾರದೆಂದು ಹೇಳುತ್ತಿದ್ದೇವೆ. ಹಾಗೆ ವಿಜ್ಞಾನ ಯೋಗವೆಂಬ ಅಧ್ಯಾಯದಲ್ಲಿರುವ 14ನೇ ಶ್ಲೋಕದಲ್ಲಿ ಹೇಳಿದ **"ಗುಣಮಯಿ ಮಮ ಮಾಯಾ"** ಎಂಬ ಮಾತನ್ನು ಸಹ ಮರೆಯಬಾರದೆಂದು ಹೇಳುತ್ತಿದ್ದೇನೆ.

ಈ ಎರಡು ಶ್ಲೋಕಗಳನ್ನು ಭಗವಂತನು ಭಗವದ್ಗೀತೆಯಲ್ಲಿ ಹೇಳಿರುವುದರಿಂದ ಪ್ರತಿಯೊಬ್ಬರು ಗೀತೆಯಲ್ಲಿನ ಎರಡು ಶ್ಲೋಕಗಳನ್ನು ಮರೆಯಬಾರದು. ವೇದಗಳನ್ನು ಕುರಿತು ನಿಮಗೆ ಏನು ತಿಳಿದಿದೆ ಎಂದು ಕೇಳಿದ್ದೀರಾ! ಆದ್ದರಿಂದ ವೇದಗಳನ್ನು ಕುರಿತು ನನಗೆ ತಿಳಿದಿರುವುದು ನಾನು ಹೇಳಿದ್ದೇನೆ.

**ಪ್ರಶ್ನೆ :– (ಗೋವಿಂದಾನಂದ) ಅಲ್ಲಾ ಮತ್ತು ಈಶ್ವರನಿಗು ಭೇದವಿದೆ. ನೀವು ಅಲ್ಲಾ ಮತ್ತು ಈಶ್ವರ ಒಂದೇಯೆಂದು ಸಾಯಿಬಾಬಾ ಹೇಳಿದ್ದಾನೆಂದರೇ ನಾವು ಒಪ್ಪಿಕೊಳ್ಳುವುದಿಲ್ಲ.**

**ನನ್ನ ಉತ್ತರ :–** ಸಾಯಿಬಾಬಾರವರು ಅಲ್ಲಾ ಮತ್ತು ಈಶ್ವರನಿಗು ಭೇದ ಇಲ್ಲವೆಂದು ಹೇಳಿದ್ದಾನೆಂದರೇ, ಅದರಲ್ಲಿ ಸತ್ಯಾಸತ್ಯಗಳು ಆಲೋಚಿಸದಂತೆ ಹಾಗೆ ಅಲ್ಲ, ಇಬ್ಬರಿಗು ಭೇದವಿದೆಯೆಂದು ಗೋವಿಂದಾನಂದ ಸ್ವಾಮೀಜಿ ಹೇಳಿದ್ದಾರೆ. ಹಾಗೆ ಅಲ್ಲ ಎಂದು ಅಡ್ಡ ಹೇಳಿದಾಗ ಹೇಗೆ ಒಂದಲ್ಲವೋ, ಹೇಗೆ ಭೇದವಿದೆಯೋ ವಿವರವಾಗಿ ಹೇಳಬೇಕಾದ ಜವಾಬ್ದಾರಿ ಆತನ ಮೇಲೆ ಇದೆ. ಆದರೆ ಆತನು ಅಡ್ಡ ತಗಲಿ ಮಾತನಾಡಿದಂತೆ ಯಾವುದಕ್ಕು ವಿವರವನ್ನು ಹೇಳುತ್ತಿಲ್ಲ. ದೈವತ್ವಕ್ಕೆ ಮತಗಳಿವೆಯಾ? ಎಂದು ನಾವು ಪ್ರಶ್ನಿಸುತ್ತಿದ್ದೇವೆ? ತೆಲುಗು ಭಾಷೆಯಲ್ಲಿ ಹಿಂದೂಗಳೆಲ್ಲರೂ ದೇವರನ್ನು ಈಶ್ವರನೆಂದು ಹೇಳುವುದು ನಡೆಯುತ್ತಿದೆ. ಅದರಿಂದ ದೇವರೆಂದರೂ, ಈಶ್ವರನೆಂದರೂ ಒಂದೇ ಎಂದು ತಿಳಿಸುಹೋಗಿದೆ. ಅದೇ ರೀತಿ ಮುಸ್ಲಿಮ್‌ರೆಲ್ಲರೂ ದೇವರನ್ನು ಅಲ್ಲಾಹ್ ಎನ್ನುವುದು ನಡೆಯುತ್ತಿದೆ. ಆದ್ದರಿಂದ ದೇವರೆಂದರೂ, ಅಲ್ಲಾಹ್ ಎಂದರೂ ಇಬ್ಬರೂ ಒಬ್ಬರೇಯೆಂದು ತಿಳಿಯುತ್ತಿದೆ. ತೆಲುಗು ಭಾಷೆಯಲ್ಲಿ ಹಿಂದೂಗಳು ಈಶ್ವರನೆಂದು ಹೇಳಿದರೂ, ಅರಬ್ಬೀ ಭಾಷೆಯಲ್ಲಿ ಮುಸ್ಲಿಮ್‌ರು ಅಲ್ಲಾಹ್ ಎಂದು ಹೇಳಿದರೂ ಅವರ ಅಂತರಂಗದಲ್ಲಿನ ಭಾವ ದೇವರೆಂದೇ ಇರುವು ದರಿಂದ ಅಲ್ಲಾಹ್ ಎಂದರೂ ಈಶ್ವರನೆಂದರೂ ಇಬ್ಬರೂ ಒಬ್ಬರೇಯೆಂದು ನಾವು ಹೇಳುತ್ತಿದ್ದೇವೆ. ಹಿಂದೂಗಳಲ್ಲಿ ಗೋವಿಂದಾನಂದ ಒಬ್ಬ ಸ್ವಾಮಿಯಾಗಿದ್ದು ಮನುಷ್ಯರನ್ನು ಒಂದಾಗಿ ಬೆರೆಯುವ ಮಾತುಗಳನ್ನು ಹೇಳದೆ, ಒಂದಾಗಿರುವ

ಮನುಷ್ಯರನ್ನು ಬೇರ್ಪಡಿಸುವಂತೆ ಮಾತನಾಡುವುದು ಸ್ವಾಮಿಗಳಿಗೆ ಸರಿಯಾ? ಎಂದು ನಾವು ಕೇಳುತ್ತಿದ್ದೇವೆ. ಅಜ್ಞಾನಿಗಳು ನಮ್ಮ ದೇವರು ಬೇರೆ ಎಂದರೂ, ಹಾಗಲ್ಲ ಎಲ್ಲಾರ ದೇವರು ಒಬ್ಬನೇಯೆಂದು ಹೇಳಬೇಕಾಗಿರುವುದನ್ನು ಬಿಟ್ಟು, ನೀವು ಸ್ವಾಮಿಗಳಾಗಿದ್ದು ನಿಮ್ಮ ದೇವರು ಬೇರೆ, ನಮ್ಮ ದೇವರು ಬೇರೆ ಎನ್ನುವಂತೆ ಅಲ್ಲಾಹ್, ಈಶ್ವರನು ಒಂದಲ್ಲ ಎನ್ನುವುದು ಒಳ್ಳೆಯದಾ! ಎಂದು ಕೇಳುತ್ತಿದ್ದೇವೆ.

ನಾನು ಒಬ್ಬ ಹಿಂದೂವಾಗಿ ಈಶ್ವರ ಎಂದರೇ ಅಧಿಪತಿಯೆಂದು ಅರ್ಥವಿದೆಯೆಂದು, ಪ್ರಪಂಚಕ್ಕೆಲ್ಲ ಅಧಿಪತಿಯಾದ ದೇವರನ್ನು 'ಈಶ್ವರ' ಎನ್ನುವುದರಲ್ಲಿ ಅರ್ಥದಿಂದ ಸಹ ಸರಿಹೋಗುತ್ತದೆಂದು ಹೇಳುತ್ತಿದ್ದೇವೆ. ಇನ್ನು ಹೇಳಿದರೆ ಮುಸ್ಲಿಮ್‌ರೆಲ್ಲರೂ ಅವರ ಭಾಷೆಯಲ್ಲಿ ದೇವರನ್ನು 'ಅಲ್ಲಾಹ್' ಎನ್ನುವುದು ನಡೆಯುತ್ತಿದೆ. ಅರಬ್ಬೀ ಭಾಷೆಯಲ್ಲಿ ಅಲ್ಲಾಹ್ ಎಂದರೇ ದೇವರೆಂದು ಅವರು ಹೇಳಿಕೊಳ್ಳುತ್ತಿರುತ್ತಾರೆ. ಇಲ್ಲಿ ಮುಸ್ಲಿಮ್‌ರಿಗೆ ಸಹ ತಿಳಿಯದ ಸತ್ಯವೊಂದು ಇದೆ. ಅದೇನೆಂದರೇ! ಅಲ್ಲಾಹ್ ಎಂಬ ಪದ ಸೃಷ್ಠಿ ಆದಿಯಲ್ಲಿ ಹೇಳಿದ ಜ್ಞಾನದಲ್ಲಿ ಇರುವುದರಿಂದ, ಜಿಬ್ರಯೇಲ್ ಅದೇ ಜ್ಞಾನವನ್ನೇ ಮುಹಮ್ಮದ್ ಪ್ರವಕ್ತರಿಗೆ ಹೇಳಿದಾಗ 'ಅಲ್ಲಾಹ್' ಎಂಬ ಪದವನ್ನು ಉಪಯೋಗಿಸಿ ಹೇಳಿದ್ದಾನೆ. ಆಗ ಜಿಬ್ರಯೇಲ್ ಮೂಲಕ ಮುಹಮ್ಮದ್ ಪ್ರವಕ್ತರು ಕೇಳಿ, ಅದನ್ನು ಕೇಳಿಸಿಕೊಂಡಂತೆ ತನ್ನ ಅನುಚರರಿಗೆ ತಿಳಿಸಿದ್ದಾನೆ. ಆಗಿನಿಂದ 'ಅಲ್ಲಾಹ್' ಎಂಬ ಪದ ಮುಸ್ಲಿಮ್‌ರಲ್ಲಿ ಹೇಳಲ್ಪಡುತ್ತಿದೆ. ಈಶ್ವರ ಎಂದರೇ ಅಧಿಪತಿಯೆಂದು ಅರ್ಥವಿರುವಂತೆ ಸೃಷ್ಠಿ ಆದಿಯಲ್ಲಿ ಹೇಳಲಾದ ಅಲ್ಲಾಹ್ ಎಂದರೇ ಪ್ರತ್ಯೇಕವಾದ ಅರ್ಥವಿದೆ. ಅಷ್ಟೇ ಅಲ್ಲದೆ **ಸೃಷ್ಠಿ ಆದಿಯಿಂದ ಪ್ರಪಂಚದಲ್ಲಿರುವ ಭಾಷೆ ತೆಲುಗು ಭಾಷೆ.** 'ಅಲ್ಲಾಹ್' ಎಂಬ ಪದ ಸಹ ಇಂದಿಗೂ ತೆಲುಗು ಪದವಾಗಿಯೇ ಇದೆ. **'ಅಲ್ಲಾಹ್'** ಎಂಬ ಪದವನ್ನು ಬಿಡಿಸಿ ನೋಡಿದರೆ ಹೀಗೆ ಇದೆ. **'ಲ್ಲಾಹ್'** ಎಂದರೇ ತೆಲುಗು ಭಾಷೆಯಲ್ಲಿ **'ಅಂತ್ಯ'** ಎಂದು ಅರ್ಥ. **"ಅ"** ಎಂದರೇ ಇಲ್ಲ, ಅಲ್ಲವೆಂದು ಅರ್ಥವಿದೆ. **'ಅಲ್ಲಾಹ್'** ಎನ್ನುವ ಪೂರ್ತಿ ಪದಕ್ಕೆ

ಅಂತ್ಯವಿಲ್ಲದವನೆಂದು, ದೇವರಿಗೆ ಹದ್ದುಗಳು ಇಲ್ಲವಾದ್ದರಿಂದ ಆತನನ್ನು ಅಲ್ಲಾಹ್ ಎನ್ನುವುದು ನಡೆಯುತ್ತಿದೆ. ಅಂತ್ಯ ಇಲ್ಲದವನು, ಎಲ್ಲೆಗಳು ಇಲ್ಲದವನು, ಹದ್ದುಗಳು ಇಲ್ಲದವನು ದೇವರು ಆಗಿರುವುದರಿಂದ ಸ್ವಚ್ಛವಾದ ತೆಲುಗು ಪದದ ಪ್ರಕಾರ ಅಲ್ಲಾಹ್ ಎನ್ನುವುದಾಗಿದೆ. **'ಈಶ್ವರ'** ಎಂದರೂ ದೇವರಿಗೆ ಸಂಬಂಧಿಸಿದ ಹಿರಿಮೆಯೇ ತಿಳಿಯುತ್ತಿದೆ. ಹಾಗೆಯೇ **'ಅಲ್ಲಾಹ್'** ಎಂದರೂ ದೇವರಿಗಿರುವ ಹಿರಿಮೆಯೇ ತಿಳಿಯುತ್ತಿದೆ, ಅದೂ ಅಲ್ಲದೆ ಎರಡೂ ತೆಲುಗು ಪದಗಳೇ ಆಗಿದ್ದು ತೆಲುಗು ಭಾಷೆ ಪ್ರಕಾರ ಅರ್ಥ ಕೊಡುವುದರಿಂದ, ಅಲ್ಲಾಹ್ ಎಂದರೂ ಈಶ್ವರ್ ಎಂದರೂ ಎರಡು ಒಂದೇ ದೇವರಿಗೆ ಹೇಳಿದ ಪದಗಳೆಂದು ಹೇಳಬಹುದು. ಯಾವ ಮತದಲ್ಲಿನ ಹಿರಿಯರಾದರೂ ಎಲ್ಲಾರ ದೇವರು ಒಬ್ಬನೇ ಎಂದು ಹೇಳುವುದು ದೊಡ್ಡತನವಾಗುತ್ತದೆ ಆದರೆ, ಹಾಗಲ್ಲ ನಿಮ್ಮ ದೇವರು ಬೇರೆ, ನಮ್ಮ ದೇವರು ಬೇರೆಯೆಂದು ಹೇಳುವುದರಲ್ಲಿ ಅಜ್ಞಾನವೇ ಕಾಣಿಸುತ್ತದೆ ಹೊರತು ಜ್ಞಾನ ಎನಿಸಿಕೊಳ್ಳುವುದಿಲ್ಲ.

ಸರ್ವ ಪ್ರಪಂಚಕ್ಕೆಲ್ಲಾ ಸೃಷ್ಟಿಕರ್ತ ಒಬ್ಬನೇ ಇದ್ದಾನೆ. ಕಳೆದ ಮೂರು ಯುಗಗಳಲ್ಲಿ ಒಂದೇ ಇಂದೂ ಸಮಾಜವಿತ್ತು. ಆದುದರಿಂದ ಎರಡನೆ ದೇವರು ಎಂಬ ಪ್ರಸ್ತಾವವೇ ಇಲ್ಲದಂತೆ ಇರುತ್ತಿತ್ತು. ಕೆಲವರು ಚಿಕ್ಕ ಚಿಕ್ಕ ದೇವತೆಗಳನ್ನು ಎಂದರೇ ವಿಷ್ಣು, ಈಶ್ವರ, ಬ್ರಹ್ಮ ಎಂಬ ತ್ರಿಮೂರ್ತಿಗಳನ್ನು ಆರಾಧಿಸುತ್ತಿದ್ದರೂ ಅಸಲಾದ ದೇವರು ತ್ರಿಮೂರ್ತಿಗಳನ್ನು ಸಹ ಸೃಷ್ಟಿಸಿದವನು ಪರಮಾತ್ಮ ಇದ್ದಾನೆಂಬುವ ಜ್ಞಾನಿಗಳಿರುತ್ತಿದ್ದರು. ಮೂರು ಯುಗಗಳು ಕಳೆದುಹೋಗಿ ನಾಲ್ಕನೆ ಕಲಿಯುಗ ಬಂದ ನಂತರ ಸ್ವಲ್ಪಕಾಲಕ್ಕೆ ಮತಗಳ ವಿಭಜನೆ ಬಂದಿರುವುದರಿಂದ ಅಜ್ಞಾನದಿಂದ ಮತಕ್ಕೊಬ್ಬ ದೇವರು ಎಂದು ಪ್ರಚಾರವಾಗಿದೆ. ಅಲ್ಲಿಯವರೆಗು ಏಕವಾಗಿರುವ ದೇವರನ್ನು ಅಜ್ಞಾನದಿಂದ ಬೇರೆಮಾಡಿ ಹೇಳಿಕೊಳ್ಳುವುದು ನಡೆದಿದೆ. ಮತಗಳ ಮಾಯೆಯನ್ನು ಬಿಟ್ಟು ಮನುಷ್ಯರೆಲ್ಲರೂ ಒಂದೇ, ಎಲ್ಲರಿಗೂ ಒಬ್ಬನೇ ದೇವರು ಎಂಬ ಸಿದ್ಧಾಂತದಿಂದ ನೋಡಿದರೆ ಎರಡನೆ ದೇವರೇ ಇಲ್ಲವೆಂದು ತಿಳಿಯಬಲ್ಲದು. ಅದೇ ವಿಷಯವನ್ನೇ ನಾವು

ಹೇಳುತ್ತಿದ್ದೇವೆ. ಮತವೆಂಬ ಮಾಯೆಯಲ್ಲಿ ಬಿದ್ದವರು ದೇವರುಗಳ ವಿಭಜನೆ ಬಿಟ್ಟು **'ಏಕಂ ಬ್ರಹ್ಮ' (ದೇವರು ಒಬ್ಬನೇ)** ಎಂಬ ಮಾತಿನ ಮೇಲಕ್ಕೆ ಬಂದರೇ ಈಶ್ವರನೆಂದರೂ, ಅಲ್ಲಾ ಎಂದರೂ ಒಂದೇಯೆಂದು ತಿಳಿಯಬಲ್ಲದು. ಇಬ್ಬರು ಬೇರೆಯೆಂದು ಯಾರೆಂದರೂ ಅವರು ಮತವೆಂಬ ಮಾಯೆಯಲ್ಲಿ ಸಿಲಿಕಿಕೊಂಡ ಅಜ್ಞಾನಿಗಳಾಗಿ ಲೆಕ್ಕಿಸಲ್ಪಡುತ್ತಾರೆ.

**ಪ್ರಶ್ನೆ :– (ಪ್ರೇಕ್ಷಕರು ಗೋವಿಂದಾನಂದನನ್ನು ಕೇಳಿದ ಪ್ರಶ್ನೆ) ಸರ್ವಮಾನವರನ್ನು ಸೃಷ್ಠಿಸಿದವನು ಯಾರು? ನೇರವಾಗಿ ಸಮಾಧಾನ ಹೇಳಿರಿ. (ಅದಕ್ಕೆ ಒಂದು ಅರ್ಧನಿಮಿಷ ಆಲೋಚಿಸಿ ಗೋವಿಂದಾನಂದ ಸ್ವಾಮಿ 'ಭಗವಂತನು' ಎಂದು ಹೇಳಿದ್ದಾನೆ.)**

**ನನ್ನ ಉತ್ತರ :–** ಪ್ರಶ್ನೆ ಕೇಳಿದ ವ್ಯಕ್ತಿ ಒಬ್ಬ ಸ್ತ್ರೀ. ಗೋವಿಂದಾನಂದ ಹೇಳಿದ ಉತ್ತರ ಬಹುಶಃ ಕೇಳುವವರಿಗೆಲ್ಲ ಸರಿಹೋಗಿರಬಹುದು. ಸ್ವಲ್ಪ ಜ್ಞಾನ ತಿಳಿದ ವ್ಯಕ್ತಿಯಾಗಿ ನನಗೆ ಆ ಉತ್ತರ ಯಾವುದು ಸರಿಹೋಗಲಿಲ್ಲ. ಅಷ್ಟೇ ಅಲ್ಲ ನೊಣಕ್ಕು, ಜೇನ್ನೊಣಕ್ಕು ಎಷ್ಟು ವ್ಯತ್ಯಾಸ ಇದೆಯೋ ಅಷ್ಟು ವ್ಯತ್ಯಾಸ ಸೃಷ್ಠಿಕರ್ತನಾದ ದೇವರಿಗು, ಸೃಷ್ಠಿಸಲ್ಪಟ್ಟ ಭಗವಂತನಿಗು ಇದೆ. 'ದೇವರು' ಎಂದರೇ ಸೃಷ್ಠಿಸುವ ಸೃಷ್ಠಿಕರ್ತ, 'ಭಗವಂತನು' ಎಂದರೇ ಭಗ (ಗರ್ಭ) ದಿಂದ ಸೃಷ್ಠಿಸಲ್ಪಟ್ಟವನೆಂದು ಅರ್ಥ. ಮನುಷ್ಯನ ಆಕಾರದಲ್ಲಿ ಸೃಷ್ಠಿಸಲ್ಪಟ್ಟವನು **ಭಗವಂತನು**. ಯಾವ ಆಕಾರ ಇಲ್ಲದ ಸೃಷ್ಠಿಕರ್ತ **ದೇವರು**. ದೇವರ ಅಂಶ ಭಗವಂತನಾಗಿ ಸೃಷ್ಠಿಸಲ್ಪಡಬಹುದು ಆದರೆ, ದೇವರು ಸೃಷ್ಠಿಸಲ್ಪಡುವುದಿಲ್ಲ. ಸರ್ವ ಜೀವಿಗಳನ್ನು ಸೃಷ್ಠಿಸುವವನು ಎಂದಿಗೂ ಸೃಷ್ಠಿಸಲ್ಪಡುವುದಿಲ್ಲ. ದೇವರ ಅತ್ಮ ಎನ್ನುವ ದೈವಶಕ್ತಿ ಸ್ವಲ್ಪ ಮನುಷ್ಯನಾಗಿ ಬಂದು, ಭೂಮಿಮೇಲೆ ಜ್ಞಾನವನ್ನು ಹೇಳಿಹೋಗುತ್ತಾನೆ. ಹಾಗೆ ಬಂದ ದೈವಶಕ್ತಿಯನ್ನು **'ಭಗವಂತ'** ಎಂದು ಹೇಳಬಹುದು. ಭಗವಂತನು ದೈವವೇ ಆದರೂ ಆತನು ಯಾರನ್ನು ಸೃಷ್ಠಿಸುವ ಸ್ಥಿತಿಯಲ್ಲಿ ಇರುವುದಿಲ್ಲ. ಆದುದರಿಂದ ಸೃಷ್ಠಿಸುವವನನ್ನು ಸೃಷ್ಠಿಕರ್ತ ಎಂದು ಹೇಳಬಹುದು ಅಥವಾ ದೇವರು ಎಂದು ಸಹ ಹೇಳಬಹುದು. ಹಾಗಲ್ಲದೆ

ಸರ್ವಮಾನವರನ್ನು ಸೃಷ್ಠಿಸಿದವನು ಯಾರು ಅಂದಾಗ ದೇವರೆಂದೇ ಹೇಳಬೇಕೇ ಹೊರತು ಭಗವಂತನೆಂದು ಹೇಳಬಾರದು. ಭಗವಂತನೆಂದು ಹೇಳುವುದರಿಂದ ಆ ಮಾತನ್ನು ಹೇಳುವವನು ದೇವರಿಗು ಭಗವಂತನಿಗು ವ್ಯತ್ಯಾಸ ತಿಳಿಯದವ ನೆಂದು ಸುಲಭವಾಗಿ ತಿಳಿಯಬಹುದು. ದೇವರಿಗು ಭಗವಂತನಿಗು ವ್ಯತ್ಯಾಸ ತಿಳಿಯದವನಿಗೆ ದೇವರನ್ನು ಕುರಿತಾದ ಜ್ಞಾನ ಎಷ್ಟರಮಟ್ಟಿಗೆ ಇದೆಯೋ ಅರ್ಥವಾಗಿಹೋಗುತ್ತದೆ. ಈದಿನ ಮೇಲ್ನೋಟಕ್ಕೆ ಎಷ್ಟೋ ದೊಡ್ಡ ಸ್ವಾಮೀಜಿಗ ಳಾಗಿ ಕಾಣಿಸುವವರಿಗು ಸಹ ದೇವರಿಗು ಭಗವಂತನಿಗು ಮಧ್ಯದಲ್ಲಿರುವ ವ್ಯತ್ಯಾಸ ತಿಳಿದಿಲ್ಲವೆಂದೇ ಹೇಳಬಹುದು. ದೇವರೆಂದರೂ, ಭಗವಂತನೆಂದರೂ ಇಬ್ಬರು ಒಂದೇ ಅಲ್ಲವೆ ಎಂದು ಅನ್ನುತ್ತಿದ್ದಾರೆ. ನಾಗರಹಾವಿಗು, ಮಣ್ಣು ಮುಕ್ಕುವ ಹಾವಿಗೂ ಇರುವ ವ್ಯತ್ಯಾಸ ತಿಳಿಯದವರಿಗೆ ಹಾವಿನ ಬಗ್ಗೆ ಜ್ಞಾನ ತಿಳಿದಿಲ್ಲವೆಂದು ಹೇಳಿದಂತೆ, ದೇವರಿಗು, ಭಗವಂತನಿಗು ವ್ಯತ್ಯಾಸ ತಿಳಿಯದವನಿಗೆ ದೇವರ ಬಗ್ಗೆ ಜ್ಞಾನ ಸ್ವಲ್ಪವಾದರೂ ತಿಳಿದಿಲ್ಲವೆಂದು ಹೇಳಬಹುದು. ಈಗ ಮನುಷ್ಯರನ್ನು ಸೃಷ್ಠಿಸಿದವನು ಯಾರು? ಅಂದಾಗ ಗೋವಿಂದಾನಂದ ಸ್ವಾಮಿ ಭಗವಂತನೆಂದು ಉತ್ತರ ಹೇಳಿದ್ದಾನೆಂದರೇ ಆತನಿಗೆ ದೇವರ ವಿಷಯ ತಿಳಿದಿಲ್ಲವೆಂದು ಅರ್ಥವಾಗುತ್ತಿದೆ. ದೇವರು ಯಾರು? ಎಂಬ ವಿಷಯ ತಿಳಿಯುದವನು 'ಸಾಯಿಬಾಬಾ ದೇವರು ಅಲ್ಲ' ಎಂದು ಆರೋಪಿ ಸುತ್ತಿದ್ದಾನೆಂದರೇ ಆತನಿಗೆ ಆ ವಿಷಯ ಪೂರ್ತಿ ತಿಳಿದು ಆರೋಪಿಸುತ್ತಿಲ್ಲವೆಂದು ಅರ್ಥವಾಗುತ್ತಿದೆ. ದೇವರ ವಿಷಯ ತಿಳಿಯದಿದ್ದರೂ ಈತನು ದೇವರು, ಈತನು ದೇವರು ಅಲ್ಲ, ಈತನು ಭಗವಂತನು ಎಂಬ ವಿಷಯವನ್ನು ತಿಳಿಯುದವನು ಸಾಯಿಬಾಬಾ ದೇವರಲ್ಲ ಎಂದು ವಾದಿಸುವುದಕ್ಕೆ ಬಂದಿದ್ದಾನೆಂದರೇ ಆತನಿಗೆ ವಿಷಯ ತಿಳಿದು ಬರಲಿಲ್ಲವೆಂದು ತಿಳಿಯುತ್ತಿದೆ. ಹಾಗೆ ವಾದಿಸಿದರೆ ತನಗೆ ಹೆಸರು ಬರುತ್ತದೆಂಬ ಉದ್ದೇಶದಿಂದ ಬಂದಿದ್ದಾನೆಂದು ಅರ್ಥವಾಗುತ್ತಿದೆ. ಸರ್ವ ಸಾಧಾರಣವಾಗಿ ಮನುಷ್ಯನಾಗಿ ಕಾಣಿಸುವವನನ್ನು ಯಾರೂ ದೇವರೆಂದು ಹೇಳಬಾರದು. ಆತನು ದೈವಾಂಶದಿಂದ ಹುಟ್ಟಿದವ ನಾದರೂ ಆತನನ್ನು 'ಭಗವಂತನು' ಎಂದು ಹೇಳಬೇಕೆ ಹೊರತು, ದೇವರೆಂದು

ಅನ್ನಬಾರದು. ಅಂತಹ ವಿವರವನ್ನು ತಿಳಿಯದಂತೆ ಒಬ್ಬ ಮನುಷ್ಯನನ್ನು ದೇವರು ಅಲ್ಲವೆಂದು ವಾದಿಸುವುದು ಅಜ್ಞಾನವೇ ಆಗುತ್ತದೆ. ಸಾಯಿಬಾಬಾನನ್ನು ದೇವರೆಂದು ನಾವು ಸಹ ಹೇಳಲಿಲ್ಲ ಅಲ್ಲವೆ! ಆತನನ್ನು ಒಂದುವೇಳೆ ಅಂದರೇ ಭಗವಂತನೆಂದು ಹೇಳಬಹುದು.

**ಪ್ರಶ್ನೆ :– (ಗೋವಿಂದಾನಂದ) ಕಲಿಯುಗ ದೈವ ಸಾಯಿಬಾಬಾ ಎಂದು ಅನ್ನುತ್ತಿದ್ದಾರೆ. ಆ ಮಾತನ್ನು ನಾನು ಒಪ್ಪಿಕೊಳ್ಳುವುದಿಲ್ಲ. ವೆಂಕಟೇಶ್ವರ ಸ್ವಾಮಿಯೇ ಕಲಿಯುಗ ದೈವ, ಕಲಿಯುಗ ದೇವರು ಒಬ್ಬನೇ ಇರುತ್ತಾನೆ ಹೊರತು, ಇಬ್ಬರು ಅಥವಾ ಮೂವರು ಇರುವುದಿಲ್ಲ.**

**ನನ್ನ ಉತ್ತರ :–** ವೆಂಕಟೇಶ್ವರ ಸ್ವಾಮಿ ಪುರಾಣಗಳಲ್ಲಿ ಸೃಷ್ಠಿಸಲ್ಪಟ್ಟವನು. ಸಾಯಿಬಾಬಾ ಆದರೆ ಚರಿತ್ರೆ ಇರುವ ಮನುಷ್ಯ. ಇಬ್ಬರಲ್ಲಿ ಒಬ್ಬರೇ ಕಲಿಯುಗ ದೈವವಾಗಿ ಇರಬೇಕು. ಒಂದು ಪದವಿಯಲ್ಲಿ ಒಬ್ಬರೇ ಇರಬೇಕು. ಇಬ್ಬರು ಹೇಗೆ ಇರುತ್ತಾರೆ ಎನ್ನುವಂತಿದೆ. ಕಲಿಯುಗ ದೈವ ಎಂಬಮಾತು ಒಂದು ಪದವಿಯಂತದ್ದು ಅಲ್ಲ. ಕಲಿಯುಗ ದೈವ ಎಂಬ ಮಾತು ಪ್ರಜೆಗಳಿಂದ ಬರುವ ಮಾತೇ ಹೊರತು, ಮೊದಲೇ ನೇತಾಕಿಕೊಳ್ಳುವ ಬೋರ್ಡಿನಂತಹದ್ದು ಅಲ್ಲ. ಕಲಿಯುಗ ದೈವ ಎಂಬ ಹೆಸರು ಎಷ್ಟು ಜನರಿಗಾದರೂ ಬರಬಹುದು. ಅದು ಅವರವರ ಭಕ್ತಿಯನ್ನನುಸರಿಸಿ ಇರುತ್ತದೆ. ಉದಾಹರಣೆಗೆ ನೋಡಿದರೆ ಉತ್ತರ ಭಾರತದೇಶದಲ್ಲಿ ಕಾಳಿಮಾತೆಯನ್ನು ಬಹಳ ಜನರು ಆರಾಧಿಸುತ್ತಾರೆ. ಅಲ್ಲಿಯವರು ಉಳಿದ ದೇವತೆಗಳಿಗಿಂತ ಕಾಳಿಮಾತೆಯನ್ನು ಹೆಚ್ಚಾಗಿ ಪೂಜಿಸುವುದರಿಂದ ಆ ಪ್ರಾಂತದಲ್ಲಿ ಕಲಿಯುಗ ದೈವವೆಂದರೇ ಕಾಳಿಮಾತೆ ಎಂದೇ ಹೇಳುತ್ತಾರೆ.

ಉತ್ತರಪ್ರದೇಶದಲ್ಲಿ ಆಗ್ರಾ, ಮಥುರ ಪ್ರಾಂತದಲ್ಲಿ ಶ್ರೀಕೃಷ್ಣನನ್ನು ಹೆಚ್ಚಾಗಿ ಆರಾಧಿಸುವುದು ನಡೆಯುತ್ತಿದೆ. ಆ ಪ್ರಾಂತದ ಸುತ್ತುಮುತ್ತಲು ಮಥುರ, ಬೃಂದಾವನಕ್ಕೆ ಎಲ್ಲಾಕಡೆ ಎಲ್ಲಿ ನೋಡಿದರೂ ಶ್ರೀಕೃಷ್ಣನ ದೇವಾಲಯಗಳೇ

ಕಾಣಿಸುತ್ತವೆ. ಅಲ್ಲಿ ಹೆಚ್ಚಾಗಿ ಕೃಷ್ಣನ ಭಕ್ತರಿರುವುದರಿಂದ ಅವರ ಭಕ್ತಿಯನ್ನು ಅನುಸರಿಸಿ ಶ್ರೀಕೃಷ್ಣನೇ ಕಲಿಯುಗ ದೈವವೆಂದು ಅನ್ನುತ್ತಾರೆ. ಅದನ್ನು ನಾವು ಅಲ್ಲಗಳೆಯುವುದಕ್ಕೆ ಆಗುತ್ತದಾ? ಅವರವರ ಭಕ್ತಿಯನ್ನನುಸರಿಸಿ ಈ ವಿಷಯ ಇರುತ್ತದೆ ಆದರೆ, ಒಬ್ಬರ ನಿರ್ಣಯದ ಮೇಲೆ ಆಧಾರಪಟ್ಟಿರುವುದಿಲ್ಲ. ನಂತರ ಭಾರತದೇಶದಲ್ಲಿಯೇ ಮಧ್ಯಪ್ರದೇಶ್‌ದಿಂದ ಆಂಧ್ರರಾಷ್ಟ್ರದವರೆಗು ಸೀತಾ ರಾಮನನ್ನು ಹೆಚ್ಚಾಗಿ ಗುಡಿಕಟ್ಟಿ ಆರಾಧಿಸುವುದಿದೆ. ಪ್ರತಿ ಹಳ್ಳಿಯಲ್ಲಿಯೂ ಸಹ ರಾಮನ ಗುಡಿ ತಪ್ಪದೆ ಇರುತ್ತದೆ. ಪ್ರತಿ ದಿನ ಆ ಗುಡಿಯಲ್ಲಿ ರಾಮನ ಭಜನೆ ಮಾಡುತ್ತಾರೆ. ಆದ್ದರಿಂದ ಅಯೋಧ್ಯದಿಂದ ಪ್ರಾರಂಭಗೊಂಡು ಆಂಧ್ರವರೆಗು ಶ್ರೀರಾಮನನ್ನೇ ಕಲಿಯುಗ ದೈವವೆಂದು ಹೇಳುತ್ತಿದ್ದಾರೆ. ಆಂಧ್ರದಲ್ಲಿ ಭದ್ರಾಚಲಂ, ಒಂಟಿಮಿಟ್ಟ ಮೊದಲಾದ ದೊಡ್ಡ ದೇವಾಲಯಗಳು ಶ್ರೀರಾಮನಿಗೆ ಇವೆ. ಪೂರ್ತಿ ದಕ್ಷಿಣ ಭಾರತದೇಶದೊಳಗೆ ಬಂದರೆ ಈಶ್ವರ ಲಿಂಗವಿರುವ ದೇವಾಲಯಗಳು ಹೆಚ್ಚಾಗಿವೆ. ದಕ್ಷಿಣ ದೇಶವೆಲ್ಲಾ ಈಶ್ವರನನ್ನೇ ಹೆಚ್ಚಾಗಿ ಆರಾಧಿಸುತ್ತಾ ಆತನನ್ನೇ ದೇವರೆಂದು ಹೇಳುತ್ತಾರೆ. ಈ ವಿಧವಾಗಲ್ಲದೆ ತಿರುಪತಿಯಲ್ಲಿ ವೆಂಕಟೇಶ್ವರ ಸ್ವಾಮಿ, ಶಬರಿಮಲೆಯಲ್ಲಿ ಅಯ್ಯಪ್ಪಸ್ವಾಮಿ, ಭದ್ರಾದ್ರಿಯಲ್ಲಿ ರಾಮನು, ಶ್ರೀಲಂಕದಲ್ಲಿ ರಾವಣಬ್ರಹ್ಮ, ಕಲಕತ್ತಾದಲ್ಲಿ ಕಾಳಿಮಾತ ಮೊದಲಾದ ಪ್ರಾಂತೀಯ ದೇವತೆಗಳೆಲ್ಲರೂ ಕಲಿಯುಗ ದೈವವಾಗಿಯೇ ಹೇಳಲ್ಪಡುತ್ತಿದ್ದಾರೆ. ಇದರಲ್ಲಿ ಯಾರನ್ನು ಅಲ್ಲ ಎಂದಾಗಲಿ, ಹೌದು ಎಂದಾಗಲಿ ಅನ್ನುವುದಕ್ಕೆ ಸಾಧ್ಯವಿಲ್ಲ. ಅವರವರ ಭಕ್ತಿಯನ್ನನುಸರಿಸಿ ಅವರು ಪೂಜಿಸುವ ದೇವರನ್ನು ದೊಡ್ಡದಾಗಿಯೇ ಹೇಳಿಕೊಳ್ಳುತ್ತಾರೆ. ಇದೆಲ್ಲವೂ ಸಹಜವಾಗಿ ಹೇಳುವುದೆ ಹೊರತು, ಒಂದು ಘನತೆಯನ್ನು ನೋಡಿ ನಿರ್ಣಯಮಾಡಿ ಹೇಳುವುದಲ್ಲ.

ಮೇಲೆ ಹೇಳಿದ ದೇವರುಗಳಲ್ಲಿ ಪುರಾಣ ದೇವರುಗಳೇ ಹೆಚ್ಚಾಗಿದ್ದಾರೆ. ಪ್ರಸ್ತುತ ಕಾಲದಲ್ಲಿ ಚರಿತ್ರೆ ಹೊಂದಿ ಮನುಷ್ಯರಾಗಿರುವವನನ್ನು ಸಹ ಕೆಲವರು ದೊಡ್ಡದಾಗಿ ಹೇಳುತ್ತಿದ್ದಾರೆ. ಶಿರಿಡಿ ಸಾಯಿಬಾಬಾ ಮರಣಿಸಿ ನೂರುವರ್ಷಗಳು

ಕಳೆದರೂ, ಆತನನ್ನು ಕಲಿಯುಗ ದೇವರು ಅನ್ನುತ್ತಿದ್ದಾರೆ. ಇನ್ನು ಸತ್ಯಸಾಯಿಯಾಗಿ ಕಾಣಿಸುವ ಮನುಷ್ಯನನ್ನು ನಡೆದಾಡುವ ದೇವರು ಎಂದು ಕರೆಯುತ್ತಿದ್ದಾರೆ. ಹೀಗೆ ಅವರವರ ಭಕ್ತಿಯನ್ನನುಸರಿಸಿ ಅವರು ಆರಾಧಿಸುವ ದೇವರುಗಳನ್ನಾಗಲಿ, ಮನುಷ್ಯರನ್ನಾಗಲಿ ದೊಡ್ಡದಾಗಿ ಹೇಳುತ್ತಿದ್ದಾರೆ. ಕಲಿಯುಗ ದೇವರು ಒಬ್ಬನೆ ಇರಬೇಕು ಇಬ್ಬರು ಇರಬಾರದೆಂದಾಗಲಿ, ಇಂತಹ ಅರ್ಹತೆಗಳಿರುವವರೇ ಕಲಿಯುಗ ದೇವರು ಎಂದಾಗಲಿ ಎಲ್ಲಿಯಾದರೂ ಯಾರಾದರೂ ಹೇಳಿದ್ದಾರಾ? ಇಲ್ಲದಿದ್ದರೆ ಎಲ್ಲಾದರೂ ಯಾವ ಗ್ರಂಥದಲ್ಲಾದರೂ ಬರೆದಿಟ್ಟಿದ್ದಾರಾ? ಅಂತಹ ನಿರ್ಣಯ ಎಲ್ಲಿಯೂ ಇಲ್ಲದಿರುವಾಗ, ಯಾರೂ ಹೇಳದಿರುವಾಗ ಮಧ್ಯದಲ್ಲಿ ಗೋವಿಂದಾನಂದ ಹೇಳುವುದರಲ್ಲಿ ಆತನ ಉದ್ದೇಶ ಏನು? ಎಂದು ಯೋಚಿಸಿ ನೋಡಿದರೆ, ಆತನ ಎದುರಿಗಿರುವವನು ಮಾತನಾಡುವ ಮಾತನ್ನು ಅಸೂಯೆಯಿಂದ ಅಲ್ಲವೆನ್ನುವುದು ಹೊರತು ಇನ್ನೊಂದು ಇಲ್ಲವೆಂದು ತಿಳಿಯುತ್ತಿದೆ.

ಒಬ್ಬ ವ್ಯಕ್ತಿಯನ್ನು ದೇವರೆಂದು ಹೇಳುವುದಕ್ಕಾಗಲಿ, ದೇವರು ಅಲ್ಲ ಎಂದು ಹೇಳುವುದಕ್ಕಾಗಲಿ ಆ ವ್ಯಕ್ತಿ ಹೇಳಿದ ಜ್ಞಾನವನ್ನು ಅನುಸರಿಸಿ ಇರುತ್ತದೆ. ಮನುಷ್ಯನಾಗಿ ಹುಟ್ಟಿದವನು ದೇವರಲ್ಲ ಆದರೆ, ದೇವರ ಅಂಶವಾದ ಭಗವಂತನೆಂದು ಹೇಳಬಹುದು. ಭಗವಂತನು ದೇವರ ಅಂಶದಿಂದ ಬಂದವನಾದ್ದರಿಂದ, ಆತನನ್ನು ಗೌರವಾರ್ಥವಾಗಿ ದೇವರೆಂದು ಹೇಳಬಹುದು ಆದರೆ, ವಾಸ್ತವಕ್ಕೆ ಆತನು ಭಗವಂತನೇ ಆಗುತ್ತಾನೆ. ದೇವರು ಎಂದರೇ ಆತನು ಮುಖ್ಯವಾದ ಮೂರು ಧರ್ಮಗಳನ್ನು ಹೊಂದಿದ್ದಾನೆ. ಅವು ಯಾವುವು ಎಂದರೇ ನಾಮ, ರೂಪ, ಕ್ರಿಯಾ ರಹಿತನು ದೇವರೆಂದು ಹೇಳಬಹುದು. ದೇವರಿಗೆ ಹೆಸರಿರುವುದಿಲ್ಲ. ರೂಪವಿರುವುದಿಲ್ಲ. ಹಾಗೆಯೇ ಕೆಲಸ ಮಾಡುವ ವನಲ್ಲ. ಈ ಪದ್ಧತಿಯಾಗಿರುವ ದೇವರ ಜ್ಞಾನ ದೇವರಿಗೆ ಹೊರತು ಯಾರಿಗೂ ತಿಳಿದಿಲ್ಲ. ಹಾಗಿರುವಾಗ ಎಂದಿಗಾದರೂ ತನ್ನ ಜ್ಞಾನವನ್ನು ತಾನೇ ಇತರರಿಗೆ ಹೇಳಬೇಕಾಗಿದೆ. ಹಾಗೆ ಹೇಳಬೇಕಾಗಿ ಬಂದಾಗ ದೇವರು ಸ್ವತಃವಾಗಿ ಒಬ್ಬ

ಮನುಷ್ಯನ ಆಕಾರವನ್ನು ಹೋಲಿದ ಬೊಂಬೆಯನ್ನುಮಾಡಿ, ಅದರೊಳಗೆ ತನ್ನ ಆತ್ಮವನ್ನೇ ಊದಿ ಸಜೀವವಾಗಿರುವ ಮನುಷ್ಯನನ್ನಾಗಿ ಕಳಿಸುತ್ತಾನೆ. ಹಾಗೆ ಬಂದಿರುವ ಮನುಷ್ಯನನ್ನು ಭಗವಂತನೆಂದು ಕರೆಯುತ್ತಿದ್ದೇವೆ. ಭಗವಂತನ ವೇಷದಲ್ಲಿ ಬಂದ ದೇವರು ಆಗ ಪ್ರಜೆಗಳಿಗೆ ತನ್ನ ಜ್ಞಾನವನ್ನು ತಿಳಿಸಿ ಹೋಗುತ್ತಾನೆ. ಹಾಗೆ ಮನುಷ್ಯ ಆಕಾರದಲ್ಲಿ ಬಂದಿರುವ ದೈವವನ್ನು ನಿಜವಾದ ದೈವವೆಂದು ಹೇಳಬಹುದು. ದ್ವಾಪರ ಯುಗದಲ್ಲಿ ಕೃಷ್ಣನು ಭಗವಂತನಾಗಿ ಬಂದಿದ್ದಾನೆ, ಆದ್ದರಿಂದ ಆತನನ್ನು ದ್ವಾಪರಯುಗ ದೇವರೆಂದು ಹೇಳಬಹುದು. ಕಲಿಯುಗದಲ್ಲಿ ಭಗವಂತನು ಬಂದರೇ ಆತನನ್ನು ಮಾತ್ರ ಕಲಿಯುಗ ದೈವವೆಂದು ಹೇಳಬಹುದು.

**ಪ್ರಶ್ನೆ :– (ಗೋವಿಂದಾನಂದ) ಸನ್ಯಾಸಿಗಿರಬೇಕಾದ ಲಕ್ಷಣಗಳೇನು? ಪ್ರತಿದಿನ ಗಡ್ಡ ಬೋಳಿಸುವವನು ಸನ್ಯಾಸಿ ಅಲ್ಲ.**

**ನನ್ನ ಉತ್ತರ ;–** ಸನ್ಯಾಸತ್ತ್ವ ಎಂಬುದು ಮನುಷ್ಯರಿಗೆ ತಿಳಿದಿಲ್ಲವೆಂದು ದೇವರೆ ಭಗವಂತನಾಗಿ ಬಂದಾಗ ಸನ್ಯಾಸತ್ತ್ವವನ್ನು ಕುರಿತು ಪ್ರತ್ಯೇಕವಾಗಿ ಹೇಳುವುದಾಗಿದೆ. ಹಾಗೆ ದೇವರೇ ಇಳಿದುಬಂದು ಹೇಳಿದರೂ ಸ್ವಾಮೀಜಿ ಗಳಾದವರಿಗೆ, ಸನ್ಯಾಸತ್ತ್ವ ತೆಗೆದುಕೊಂಡವರಿಗೆ, ಸನ್ಯಾಸತ್ತ್ವವನ್ನು ಕುರಿತಾದ ಅವಗಾಹನೆ ಇಲ್ಲದಿರುವುದು ಆಶ್ಚರ್ಯಪಡಬೇಕಾದ ವಿಷಯ. ಸ್ವಾಮೀಜಿಗಳು ಬೆಳೆಸುವ ಗಡ್ಡಗಳಿಗು ಸನ್ಯಾಸತ್ತ್ವಕ್ಕು ಯಾವುದೆ ಸಂಬಂಧವಿಲ್ಲ. ಆದರೂ ಸನ್ಯಾಸಿಗಳೆಲ್ಲರ ದೃಷ್ಠಿ ತಮ್ಮ ಗಡ್ಡದ ಮೇಲೇ ಇದೆ. ಆದ್ದರಿಂದ ಗಡ್ಡವನ್ನು ಬೋಳಿಸಿಕೊಂಡ ರಮಣಾನಂದನನ್ನು ಹೇಳನಮಾಡಿದಂತೆ ನೀನು ಸನ್ಯಾಸಿಯಾ? ನಿತ್ಯ ಗಡ್ಡವನ್ನು ಬೋಳಿಸಿಕೊಳ್ಳುವವನು ಸನ್ಯಾಸಿಗಳಾಗುತ್ತಾರಾ ಎಂದು ಕೇಳಿದ್ದಾನೆ. ಅದಕ್ಕೆ ರಮಣಾನಂದರು ನಾನು ಮರ್ಹರ್ಷಿ ನಾನು ಹೇಗಾದರೂ ಇರಬಹುದು. ನಾನು ನಿಮ್ಮಂತೆ ಸನ್ಯಾಸಿ ಅಲ್ಲ ನಾನು ರಾಜರ್ಷಿಯೆಂದು ಹೇಳಿದ್ದಾನೆ. ಈ ವಿಷಯವನ್ನು ಕೇಳಿದ ಪ್ರಜೆಗಳು ಸ್ವಲ್ಪ ಸಂದಿಗ್ಧದಲ್ಲಿ ಬೀಳುವುದು ಸಹಜ. ಆದ್ದರಿಂದ ಇಲ್ಲಿ ಪ್ರಜೆಗಳಿಗೆ ಅರ್ಥವಾಗುವಂತೆ ಸ್ವಲ್ಪ ವಿವರವನ್ನು ಕೊಡಬೇಕೆಂದು

ಕೊಂಡಿದ್ದೇನೆ. ಪ್ರಥಮ ದೈವಗ್ರಂಥವಾದ ಭಗವದ್ಗೀತೆಯಲ್ಲಿ ಆತ್ಮ ಸಂಯಮ ಯೋಗವೆಂಬ ಅಧ್ಯಾಯದಲ್ಲಿ ಮೊಟ್ಟಮೊದಲ ಶ್ಲೋಕ ಸನ್ಯಾಸತ್ತ್ವವನ್ನು ಕುರಿತು ಹೇಳಿರುವುದೆ ನೋಡಿರಿ.

***(5).1 ಶ್ಲೋ॥ ಅನಾಶ್ರಿತಃ ಕರ್ಮಫಲಮ್ ಕಾರ್ಯಂ ಕರ್ಮಕರೋತಿ ಯಃ ।***
***ನ ಸನ್ಯಾಸೀ ಚ ಯೋಗೀಚ ನನಿರಗ್ನಿ ರ್ನಚಾಕ್ರಿಯಃ ॥***

**ಭಾವಾರ್ಥ :–** ಕರ್ಮಫಲವನ್ನು ಆಶ್ರಯಿಸದೆ ಕಾರ್ಯಗಳನ್ನು ಮಾಡಬೇಕೆಂದು ತಿಳಿದು ಯಾರು ಮಾಡುತ್ತಾರೋ ಅವನೇ ನಿಜವಾದ ಸನ್ಯಾಸಿ, ನಿಜವಾದ ಯೋಗಿ. ಅಗ್ನಿ ಇಲ್ಲದಂತಹವನು, ಕೆಲಸಗಳನ್ನು ಬಿಟ್ಟವನು ಯೋಗಿಯು ಅಲ್ಲ ಮತ್ತು ಸನ್ಯಾಸಿಯು ಅಲ್ಲ.

**ವಿವರ :–** ಯೋಗಿಯನ್ನು ಸನ್ಯಾಸಿ ಎಂದು, ಸನ್ಯಾಸಿಯನ್ನು ಯೋಗಿಯು ಎಂದು ಕರೆಯಬಹುದು. ಸನ್ಯಾಸಿ ಎಂದರೂ, ಯೋಗಿ ಎಂದರೂ ಎರಡು ಒಂದೇ ಅರ್ಥವೆಂದು ತಿಳಿಯಬೇಕು. ಈ ಅಧ್ಯಾಯದಲ್ಲಿ ಮೊದಲಿಗೇ ಸನ್ಯಾಸಿ ಎಂದರೇ ಯಾರೆಂದು ಅರ್ಥವಾಗುವಂತೆ ಭಗವಂತನು ಹೇಳಿದ್ದಾನೆ. ನಿತ್ಯ ಜೀವನದಲ್ಲಿ ಹೊಟ್ಟೆಪಾಡಿಗಾಗಿ ಎಷ್ಟೋ ಜನ ಎಷ್ಟೋ ಕೆಲಸಗಳನ್ನು ಮಾಡುತ್ತಿದ್ದಾರೆ. ಇದಕ್ಕೆ ಸಮ್ಮತವಾಗಿ **"ಕೂಳಿಗೋಸ್ಕರ ಕೋಟಿ ಕೆಲಸಗಳೆಂದಿದ್ದಾರೆ."** ಎಷ್ಟೋ ಕೆಲಸಗಳಿಂದ ಕೂಡಿಕೊಂಡ ನಮ್ಮ ಜೀವನದಲ್ಲಿ ಎಲ್ಲಾ ಕೆಲಸಗಳು ಒಳ್ಳೆಯವು ಇರುವುದಿಲ್ಲ, ಹಾಗೆ ಎಲ್ಲಾ ಕೆಲಸಗಳು ಕೆಟ್ಟವು ಇರುವುದಿಲ್ಲ. ಕೆಲಸಗಳು ಒಳ್ಳೆಯವಾದರೂ ಕೆಟ್ಟವಾದರೂ ನಾವೇತಕ್ಕೆ ಮಾಡುತ್ತಿದ್ದೇವೆ ಎಂದುಕೊಂಡರೆ, ಕೆಲಸ ಮಾಡುವುದರಿಂದ ಅದಕ್ಕಿಷ್ಟು ಕೂಲಿಯೆಂದು ಪ್ರತಿಫಲ ಇರುತ್ತದೆ. ಒಂದು ದಿನ ಕೆಲಸ ಮಾಡುವುದರಿಂದ 100 ರೂಪಾಯಿಗಳು ಪ್ರತಿಫಲ ಬರುತ್ತದೆಂದುಕೊಳ್ಳೋಣ. ಹೀಗೆ ಒಬ್ಬೊಬ್ಬರ ಕೆಲಸ ಬೇರೆ ಮತ್ತು ಫಲಿತ ಬೇರೆಯಾಗಿರುತ್ತದೆ. ರೋಡ್ ಪ್ಲಾನ್ ಹಾಕುವ ಇಂಜನೀಯರ್‌ಗೆ ಒಂದು ಫಲಿತ, ಅದೇ ರಸ್ತೆ ಕೆಲಸ ಮಾಡುವವನಿಗೆ ಒಂದು ಫಲಿತವಿರುತ್ತದೆ.

ಒಬ್ಬ ಮನುಷ್ಯನಿಗೆ ದಿನಕ್ಕೆ ಸ್ವಲ್ಪ ಕಣ್ಣಿಗೆ ಕಾಣಿಸುವ ಫಲಿತವಿರುವ ವಿಷಯ ಎಲ್ಲರಿಗೂ ತಿಳಿದ ವಿಷಯವೇ.

ಎಲ್ಲರಿಗೂ ತಿಳಿಯದ ವಿಷಯ ಸಹ ಒಂದಿದೆ. ಅದೇನೆಂದರೇ! ಮನುಷ್ಯ ಮಾಡುವ ಪ್ರತಿಯೊಂದು ಕೆಲಸದಲ್ಲಿಯೂ ಕಣ್ಣಿಗೆ ಕಾಣಿಸದ ಫಲಿತವು ಸಹ ಒಂದಿದೆ. ಕಣ್ಣಿಗೆ ಕಾಣಿಸುವ ಫಲಿತವು ಹಣದ ರೂಪವಾಗಿ, ಕಾಣಿಸದ ಫಲಿತ ಕರ್ಮ ರೂಪವಾಗಿದೆ. ಕರ್ಮ ಕಾಣಿಸದಿರುವುದಾದ್ದರಿಂದ ಯಾವ ಕೆಲಸದಲ್ಲಿ ಯಾರಿಗೆ ಎಷ್ಟು ಕರ್ಮ ಬರುವುದು ಹೇಳಲಾರೆವು. ಹೊರಗಿನ ಫಲಿತವನ್ನು ಸಂಪಾದಿಸಿಕೊಂಡಿರುವುದನ್ನು ಅನುಸರಿಸಿ ಅವನು ಇಷ್ಟು ಧನಿಕನು, ಇವನು ಇಷ್ಟು ಬಡವನು ಎಂದು ಹೇಳಬಹುದು. ಕಾಣಿಸದ ಫಲಿತವಾದ ಕರ್ಮವನ್ನನುಸರಿಸಿ ಯಾರೆಷ್ಟು ಕರ್ಮವರನೋ ಹೇಳಲಾರೆವು. ಇದೆಲ್ಲವನ್ನು ಅನುಸರಿಸಿ ಉರಿಯುತ್ತಿರುವ ಅಗ್ನಿಗೆ ಕೆಳಗೆ ಕಾಣಿಸುವ ಕಟ್ಟಿಗೆಗಳು ಮೇಲೆ ಕಾಣಿಸದ ಗಾಳಿ ತಗುಲಿಕೊಂಡಿರುವಂತೆ, ನಡೆಯುತ್ತಿರುವ ಕೆಲಸಕ್ಕೆ ಒಂದು ಕಡೆ ಕಾಣಿಸುವ ಫಲಿತ ಮತ್ತೊಂದುಕಡೆ ಕಾಣಿಸದ ಫಲಿತ ಇದೆ. ರೂಪಾಯಿಬಿಲ್ಲೆಗೆ ರಾಜ ರಾಣಿಯಂತದ್ದೇ ಕಾರ್ಯಕ್ಕೆ ಕಾಣಿಸುವ, ಕಾಣಿಸದ ಫಲಿತಗಳೆಂದು ತಿಳಿಯಬೇಕು. ನಮಗೆ ತಿಳಿಯದ ಮತ್ತೊಂದು ವಿಷಯವೊಂದಿದೆ. ಅದೇನೆಂದರೇ! ಮಾಡುತ್ತಿರುವ ಕೆಲಸದಲ್ಲಿ ಕಣ್ಣಿಗೆ ಕಾಣಿಸದ ಕರ್ಮವನ್ನು ಇಲ್ಲದಂತೆ ಮಾಡಿಕೊಳ್ಳುವುದು. ಮಾಡಿದ ಕೆಲಸಕ್ಕೆ ಕೂಲಿ ರೂಪಾಯಿಗಳಾಗಿ ತೆಗೆದುಕೊಂಡರೆ ರಾಜ ರಾಣಿ ಎರಡು ರೂಪಗಳು ಇರುತ್ತವೆ. ಬೇರೆ ಧಾನ್ಯ ರೂಪವಾಗಿಯೋ, ವಸ್ತು ರೂಪವಾಗಿಯೋ ತೆಗೆದುಕೊಂಡರೆ ಅದಕ್ಕೆ ಒಂದು ರೂಪ ಹೊರತು ಎರಡು ರೂಪಗಳು ಇರುವುದಿಲ್ಲ. ಹಾಗೆಯೇ ಕಾಣಿಸುವ ಒಂದು ಫಲಿತವು ಹೊರತು ಕಾಣಿಸದ ಎರಡನೇ ಫಲಿತವು ಇಲ್ಲದ ಕಾರ್ಯಗಳು, ಅವುಗಳನ್ನು ಮಾಡುವ ವಿಧಾನ ಸಹ ಇದೆಯೆಂದು ಭಗವಂತನು ತಿಳಿಸಿದ್ದಾನೆ. ಅದು ಹೇಗೆಂದರೇ! ಒಂದು ಕಾರ್ಯ ನಡೆಯುವಾಗ ಕರ್ಮ ಹೇಗೆ ತಗಲುತ್ತಿದೆಯೋ ಮೊದಲು ತಿಳಿದುಕೊಳ್ಳಬೇಕು. ನಂತರ ಕರ್ಮ ಅಂಟದ ವಿಧಾನವನ್ನು

ತಿಳಿದುಕೊಳ್ಳಬಹುದು ಎಂದು ಹೇಳಿದ್ದಾನೆ. ಇದೆಲ್ಲವೂ ಇತರೆ ದೇಶಗಳಿಗೆ ಹೋಗಿ ತಿಳಿದುಕೊಳ್ಳಬೇಕಾಗಿರುವುದು ಅಲ್ಲ, ನಮ್ಮ ದೇಹದಲ್ಲಿಯೇ ತಿಳಿದುಕೊಳ್ಳಬೇಕಾಗಿರುವುದು. ಆದ್ದರಿಂದ ಬಹಳ ಸುಲಭವಾಗಿರುತ್ತದೆ. ಒಂದು ಕಾರ್ಯ ಮಾಡುತ್ತಿರುವಾಗ ಆ ಕಾರ್ಯ ನಡೆಯುವುದಕ್ಕೆ ಕಾರಣ ಏನೆಂದು ಮೊದಲು ತಿಳಿದುಕೊಳ್ಳೋಣ. ಗತ ಜನ್ಮಗಳ ಸಂಚಿತಕರ್ಮ ಪ್ರಸ್ತುತ ಇರುವ ಜನ್ಮದಲ್ಲಿ ಪ್ರಾರಬ್ಧ ಕರ್ಮವಾಗಿ ನಿತ್ಯ ಅನುಭವಕ್ಕೆ ಬರುತ್ತಿರುತ್ತದೆ. ಒಂದು ಕಾರ್ಯ ನಡೆಯಬೇಕೆಂದರೇ ಆ ಪ್ರಾರಬ್ಧವೇ ಮೊದಲ ಕಾರಣ. ಪ್ರಾರಬ್ಧದ ಪ್ರಕಾರ ಒಂದು ವಿಷಯ ಮೊದಲು ಮನಸ್ಸಿಗೆ ಜ್ಞಾಪಕಕ್ಕೆ ಬರುತ್ತದೆ. ತಕ್ಷಣ ಆ ವಿಷಯವನ್ನು ಬುದ್ಧಿ ಗ್ರಹಿಸಿ, ಆ ಸಮಯಕ್ಕೆ ಸಹಕರಿಸುತ್ತಿರುವ ಗುಣಗಳಿಂದ ಯೋಚಿಸುತ್ತಾನೆ. ಗುಣಗಳು ಎರಡು ವಿಧಗಳಾಗಿವೆ. ಆದ್ದರಿಂದ ಬುದ್ಧಿಯೊಂದರ ಯೋಚನೆ ಸಹ ಎರಡು ವಿಧಗಳಾಗಿರುತ್ತದೆ. ಒಂದು ವಿಧದ ಗುಣಗಳ ಪ್ರಕಾರ ಬುದ್ಧಿ ಯೋಚನೆ ಆ ವಿಷಯವೊಂದರ ಕೆಲಸ ಮಾಡೆಂದು ಸೂಚಿಸಿದರೆ, ಎರಡನೆ ವಿಧವೊಂದರ ಗುಣಗಳ ಪ್ರಕಾರ ಆ ಕೆಲಸ ಮಾಡಬೇಡವೆಂದು ಬುದ್ಧಿ ಸೂಚಿಸುತ್ತದೆ. ಹೀಗೆ ಅದರಲ್ಲಿ ಲಾಭವಿರುತ್ತದೆಂದು ಒಂದು ವಿಧ, ಅದರಲ್ಲಿ ಲಾಭ ಇರುವುದಿಲ್ಲವೆಂದು ಮತ್ತೊಂದು ವಿಧ, ಇದು ಒಳ್ಳೆಯ ಕೆಲಸ ಎಂದು ಒಂದು ವಿಧ, ಎಂದರೆ ಅದಕ್ಕೆ ವಿರುದ್ಧವಾಗಿ ಇದು ಕೆಟ್ಟಕೆಲಸವೆಂದು ಮತ್ತೊಂದು ವಿಧ ಹೇಳುತ್ತಿರುತ್ತದೆ. ಹೀಗೆ ಎಲ್ಲಾ ವಿಧಗಳಾಗಿ ಯೋಚನೆ ಮಾಡುವುದೇ ಬುದ್ಧಿಯೊಂದರ ಕರ್ತವ್ಯ, ಹಾಗೆ ಯೋಚನೆ ಮಾಡಲ್ಪಟ್ಟ ವಿಷಯವನ್ನು ತಕ್ಷಣ ಪಕ್ಕದಲ್ಲಿಯೇ ಇರುವ ಚಿತ್ತವು ಗ್ರಹಿಸಿ ಆ ಕೆಲಸವನ್ನು ಮಾಡೆಂದೋ ಅಥವಾ ಮಾಡಬೇಡವೆಂದೋ ಯಾವುದೋ ಒಂದನ್ನು ನಿರ್ಣಯಿಸುತ್ತದೆ. ಹಾಗೆ ನಿರ್ಣಯಿಸುವುದೇ ಚಿತ್ತವೊಂದರ ಕೆಲಸ. ಆ ನಿರ್ಣಯ ಯಾವುದಾದರೂ ಚಿತ್ತವು ತನ್ನ ಇಷ್ಟಾನುಸಾರ ಮಾಡುವುದಿಲ್ಲ. ಅದು ಒಂದು ಆಧಾರದಿಂದಲೇ ನಿರ್ಣಯ ಮಾಡುತ್ತದೆ. ಆ ಆಧಾರ ಏನೆಂದರೇ! ಆಗಿನ ಪ್ರಸ್ತುತ ಪ್ರಾರಬ್ಧಕರ್ಮ ಏನು ನಡೆಯಬೇಕೆಂದು ತೋರಿಸುತ್ತದೋ, ಅದನ್ನೇ ಚಿತ್ತವು ನಿರ್ಣಯಿಸಿ, ಆ ವಿಷಯವನ್ನು ಜಾರಿ ಮಾಡಬೇಕಾದ

ವಿಧಾನವನ್ನು ಮನಸ್ಸಿಗೆ ತಿಳಿಸುತ್ತದೆ. ಮನಸ್ಸು ತಕ್ಷಣ ಆ ವಿಷಯವನ್ನು ಶರೀರ ಬಾಹ್ಯೇಂದ್ರಿಯಗಳಿಗೆ ಸೇರಿಸುತ್ತದೆ. ಮನಸ್ಸು ಆದೇಶಿಸಿದಂತೆ ಶರೀರ ಅವಯವಗಳು ಕೆಲಸ ಮಾಡುತ್ತವೆ. ಇದೆಲ್ಲವೂ ಒಂದು ಕಾರ್ಯ ನಡೆಯುವುದಕ್ಕೆ ನಿರ್ಣಯಿಸಲ್ಪಟ್ಟ ಯಂತ್ರಾಂಗವೆಂದು ತಿಳಿಯಬೇಕು. ಪ್ರಾರಬ್ಧ ಕರ್ಮ ಕಾರ್ಯ ರೂಪವಾಗುವುದಕ್ಕೆ ಮನಸ್ಸು, ಬುದ್ಧಿ, ಚಿತ್ತ ಶರೀರ ಅವಯವಗಳು ಹತ್ತು ಒಟ್ಟು ಹದಿಮೂರು ಪಾತ್ರಧಾರಿಗಳಾಗಿವೆ.

ಒಂದು ಕಾರ್ಯ ನಡೆಯುವಾಗ ಶರೀರಯಂತ್ರಾಂಗ ಹೇಗಿದೆಯೋ ಗ್ರಹಿಸಿದ್ದೇವಲ್ಲವೇ ಇದರಲ್ಲಿ ಜೀವಿಯ ಪಾತ್ರ ಏನು ಇಲ್ಲ. ಜೀವಿಯು ಸಾಕ್ಷಿಯಾಗಿ ನೋಡುತ್ತಿರುವವನೇ, ಪ್ರಾರಬ್ಧಕರ್ಮ ಜಾರಿಗೆ ಬರುವುದರಲ್ಲಿ ಮನಸ್ಸು, ಬುದ್ಧಿ, ಚಿತ್ತ ಅವು ಅವುಗಳ ಕೆಲಸ ಮಾಡುತ್ತಿರುವಾಗ ಜೀವಿಯು ಸಹ ಅಲ್ಲಿಯೇ ಇದ್ದಾನೆ. ಆದ್ದರಿಂದ ಆ ವಿಷಯವೆಲ್ಲವೂ ಜೀವಿಗೆ ತಿಳಿಯುತ್ತಲೇ ಇರುತ್ತದೆ. ಹಾಗೆಯೇ ಒಂದರ ವಿಷಯ ಇನ್ನೊಂದಕ್ಕೆ ತಿಳಿಯುತ್ತಲೇ ಇರುತ್ತದೆ. ಶರೀರದಲ್ಲಿ ಜೀವಿಯು, ಮನಸ್ಸು, ಬುದ್ಧಿ, ಚಿತ್ತವು, ಆಹಮ್ ಎಂದು ಮುಖ್ಯವಾದ ಅಂತರಂಗಗಳಾದವುಗಳಲ್ಲಿ ಕರ್ಮ ಕಾರ್ಯ ರೂಪವಾಗುವುದಕ್ಕೆ ಮನಸ್ಸು, ಬುದ್ಧಿ, ಚಿತ್ತ ಮೂರು ಮಾತ್ರವೇ ಪಾತ್ರಧಾರಿಗಳಾಗಿರುವಾಗ ಜೀವಾತ್ಮ, ಅಹಮ್ ಯಾವುದೇ ಸಂಬಂಧ ಇಲ್ಲದ್ದಾಗಿವೆ. ಕಾರ್ಯ ನಡೆಯುವುದಕ್ಕೆ ಇವುಗಳ ಸಂಬಂಧ ಯಾವುದು ಇಲ್ಲ. ಮನೋ, ಬುದ್ಧಿ, ಚಿತ್ತಗಳ ಸ್ಪಂದನೆ ಪ್ರಕಾರ ಶರೀರದ ಮೂಲಕ ಕಾರ್ಯ ನಡೆಯುತ್ತಿರುವಾಗ ಆ ಕಾರ್ಯದಲ್ಲಿ ಇರುವ ದುಃಖಗಳಾಗಲಿ, ಸುಖಗಳಾಗಲಿ ಅನುಭವಿಸುವವನು ಜೀವಾತ್ಮ. ಜೀವಿಯು ಶರೀರದಲ್ಲಿ ಕಷ್ಟ ಸುಖಗಳ ಅನುಭವವನ್ನು ಹೊಂದುವುದಕ್ಕೇ ಇದ್ದಾನೆಂದು ತಿಳಿಯಬೇಕು. ಒಂದು ಸಮಯದಲ್ಲಿ ಲಡ್ಡು ತಿನ್ನಬೇಕೆಂದು ಜ್ಞಾಪಕ ಬರುವುದು, ಆಗಿನ ಆಸೆ ಗುಣದ ಪ್ರಕಾರ ಬುದ್ಧಿ ತಿನ್ನೆಂದು ಯೋಚಿಸಿರುವುದನ್ನು ಚಿತ್ತವು ನಿರ್ಣಯಿಸುವುದು, ಶರೀರದಲ್ಲಿನ ಕೈಗಳು ತಿನಿಸುವುದು, ಬಾಯಿ ತಿನ್ನುವುದು, ಅದರಲ್ಲಿನ ರುಚಿವೊಂದರ ಅನುಭೂತಿಯನ್ನು ನಾಲಿಗೆ ಮನಸ್ಸಿಗೆ ಒದಗಿಸುವುದು,

ಅದನ್ನು ತಕ್ಷಣ ಮನಸ್ಸು ಒಳಗಿರುವ ಜೀವಿಗೆ ಸೇರಿಸುವುದು, ಜೀವಿಯು ಆ ಅನುಭೂತಿಯನ್ನು ಹೊಂದಿ ಸಂತೋಷಿಸುವುದು ನಡೆಯುತ್ತಿದೆ. ಆ ವಿಧವಾಗಿಯೇ ವೈದ್ಯದ ಪ್ರಕಾರ ಔಷಧಿ ತಿನ್ನಬೇಕಾಗಿ ಬಂದಾಗ ತಿನ್ನುವ ಔಷಧಿಯಲ್ಲಿನ ಕಹಿಯನ್ನು ಸಹ ಮನಸ್ಸಿನ ಮೂಲಕ ಅನುಭವಿಸಿ ದುಃಖ ಪಡಬೇಕಾಗಿ ಬರುತ್ತದೆ. ಕೆಲಸ ಮಾಡಿಸುವುದು ಮನೊ, ಬುದ್ಧಿ, ಚಿತ್ತಗಳಾದರೆ ಸುಖ ದುಃಖಗಳು ಅನುಭವಿಸುವವನು ಜೀವಾತ್ಮ. ಪ್ರಾರಬ್ಧವೊಂದರ ಉದ್ದೇಶ ಜೀವಿಯನ್ನು ಅನುಭವಿಸುವಂತೆ ಮಾಡುವುದೇ ಆದ್ದರಿಂದ ಅದಕ್ಕೆ ತಕ್ಕಂತೆ ಶರೀರ ಯಂತ್ರಾಂಗವೆಲ್ಲವೂ ಅಳವಡಿಸಲ್ಪಟ್ಟಿದೆ.

ಇಲ್ಲಿಯವರೆಗು ಅಹಮ್‌ವೊಂದರ ಕೆಲಸವೇನೊ ತಿಳಿದಿಲ್ಲ ಅಲ್ಲವೆ! ಈಗ ನೋಡೋಣ. ಒಂದು ಕಾರ್ಯದಲ್ಲಿ ಮನಸ್ಸು, ಬುದ್ಧಿ, ಚಿತ್ತಗಳು ಶ್ರಮಿಸಿದಾಗ ನಡೆದ ಕೆಲಸದಲ್ಲಿನ ಅನುಭವವನ್ನು ಜೀವಿಯು ಹೊಂದುತ್ತಿರುವಾಗ, ಪಕ್ಕದಲ್ಲಿಯೇ ಇರುವ ಅಹಮ್ ಈ ಕೆಲಸ ಎಲ್ಲದಕ್ಕೂ ನೀನೇ ಅಧಿಪತಿ, ನಿನ್ನಿಂದಲೇ ಈ ಕೆಲಸ ನಡೆಯುತ್ತಿದೆಯೆಂದು ಜೀವಿಗೆ ಬೋಧಿಸುತ್ತಿದೆ. ಜೀವಿಯು ಅಹಮ್ ಒಂದರ ಭಾವನೆಯನ್ನು ಗ್ರಹಿಸಿದವನಾಗಿ, ಅಂದರೇ ಅಹಮ್‌ಭಾವನಾಗಿ ಈ ಕೆಲಸವನ್ನು ನಾನೇ ಮಾಡುತ್ತಿದ್ದೇನೆಂದು ಭಾವಿಸುತ್ತಿದ್ದಾನೆ. ಆಗ ಕಾರ್ಯದಲ್ಲಿ ಸ್ವಭಾವವಾಗಿ ಹುಟ್ಟಿದ ಆಗಾಮಿಕರ್ಮ ಜೀವಿಯ ಕರ್ಮಚಕ್ರದಲ್ಲಿ ಸೇರಿ ಹೋಗುತ್ತಿದೆ. ಜೀವಾತ್ಮ ಹಳೆ ಪ್ರಾರಬ್ಧಕರ್ಮವನ್ನು ಅನುಭವಿಸಿದವನಾದರೂ ಹೊಸ ಆಗಾಮಿಕರ್ಮ ಪುನಃ ಸಂಪಾದಿಸಿಕೊಂಡವನಾಗಿದ್ದಾನೆ. ಅನುಭವಿಸಿ ಹಳೆ ಕರ್ಮವನ್ನು ಇಲ್ಲದಂತೆ ಮಾಡಿಕೊಂಡಾಗ ಪುನಃ ಹೊಸ ಕರ್ಮ ಬಂದು ಸೇರಿದೆ. ಇದು ಸಾಧಾರಣ ಜೀವಿಯೊಂದರ ನಿತ್ಯ ಕರ್ಮ ವಿಧಾನ, ನಿತ್ಯ ಕಾರ್ಮಾಚರಣೆಯಲ್ಲಿ ಹುಟ್ಟಿಬರುತ್ತಿರುವ ನಿತ್ಯ ಕರ್ಮಾಭಿವೃದ್ಧಿ. ಈ ವಿಧಾನ ಸರ್ವಜಗತ್ತಿನಲ್ಲಿ ಜೀವಿಗಳ ಬಗ್ಗೆ ನಡೆಯುವ ಮಾಂತ್ರಿಕ ವಿಧಾನ. ಇದು ಅಂತರ್ಮುಖವಾಗಿ ನಡೆಯುತ್ತಿದೆ. ಆದ್ದರಿಂದ ಯಾರಿಗೂ ತಿಳಿಯದಂತೆ ಹೋಗಿದೆ. ಬಾಹ್ಯಕಾರ್ಯಗಳ ಮೇಲೆ ಇರುವ ದೃಷ್ಠಿ ಅಂತರಂಗ ವಿಧಾನದ

ಮೇಲೆ ಸ್ವಲ್ಪವಾದರೂ ಯಾರಿಗೂ ಇಲ್ಲ. ಆದ್ದರಿಂದ ಕರ್ಮ ಇಳಿಕೆಯಾಗುವುದೇ ಅಲ್ಲ ಬೆಳೆಯುತ್ತಾ ಹೋಗುತ್ತಿದೆ. ಕರ್ಮ ಇರುವವರೆಗು ಜನ್ಮಗಳು ತಪ್ಪುವುದಿಲ್ಲ. ಆದ್ದರಿಂದ ಜೀವಿಯು ಜನನ ಮರಣ ಚಕ್ರದಿಂದ ಹೊರಬೀಳದೆ ಹೋಗುತ್ತಿದ್ದಾನೆ.

ಕರ್ಮ ಹೇಗೆ ಬರತ್ತಿದೆಯೋ ತಿಳಿದುಕೊಂಡಿದ್ದೇವೆ. ಕರ್ಮ ಹೇಗೆ ಬಾರದಂತೆ ಮಾಡಿಕೊಳ್ಳಬೇಕೋ ಸಹ ತಿಳಿದುಕೊಳ್ಳೋಣ. ಇಲ್ಲಿಯವರೆಗು ಶ್ಲೋಕವೊಂದರ ನಿಜಾರ್ಥದೊಳಗೆ ನಾವು ಬರಲಿಲ್ಲ. ಈಗ ಶ್ಲೋಕಗಳಲ್ಲಿ ಹೇಳಲ್ಪಟ್ಟ ವಿಷಯಕ್ಕೆ ಬರುತ್ತಿದ್ದೇವೆ. ಪ್ರಾರಬ್ಧದ ಪ್ರಕಾರ ಕಾರ್ಯಗಳು ಹೇಗೆ ನಡೆಯುತ್ತಿವೆಯೋ, ಶರೀರದಲ್ಲಿರುವ ಮನೋ, ಬುದ್ಧಿ, ಚಿತ್ತ, ಅಹಂಕಾರ ಗಳೊಂದರ ಕೆಲಸವೇನೋ, ಏನು ಮಾಡದ ಜೀವಿಯು ಏಕೆ ಇದ್ದಾನೋ ತಿಳಿದುಕೊಂಡಿದ್ದೇವೆ. ಕೊನೆಯಲ್ಲಿರುವ ಅಹಮ್ ಕಾರ್ಯಕ್ಕೆ ಕಾರಣ ನಾನು ಎಂಬ ಭಾವನೆ ಜೀವಿಗೆ ಹುಟ್ಟಿಸುವುದರಿಂದ ಹೊಸ ಕರ್ಮವನ್ನು ತಗಲಿಸುತ್ತಿದೆಯೆಂದು ತಿಳಿದುಕೊಂಡಿದ್ದೇವೆ. ಕರ್ಮ ಅಂಟಿಕೊಳ್ಳುವುದಕ್ಕೆ ಕಾರಣ ಅಹಮ್ ಎಂದು ತಿಳಿದುಹೋಗಿದೆ. ಕರ್ಮ ತಗಲಿಸುವುದೇ ಅಹಮ್ ಒಂದರ ಕೆಲಸವಾದಾಗ, ಕರ್ಮ ನಿರ್ಮೂಲನೆಯೂ ಸಹ ಅಹಮ್ ಹತ್ತಿರವೇ ಇದೆಯೆಂದು ತಿಳಿದುಹೋಗುತ್ತಿದೆ. ಅಹಮ್ ವೊಂದರ ಮಾತನ್ನು ಜೀವಿಯು ಕುರುಡನಂತೆ ಕೇಳುವುದರಿಂದಲೇ ಕರ್ಮ ಅಂಟುತ್ತಿದೆ. ಆದ್ದರಿಂದ ಜೀವಿಗು ಅಹಮ್‌ಗು ಇರುವ ಸಂಬಂಧದಲ್ಲಿಯೇ ಕರ್ಮ ಅಂಟುವ ಸಾರಾಂಶವಿದೆ. ವಾಸ್ತವಕ್ಕೆ ಕಾರ್ಯದಲ್ಲಿ ಜೀವಿಗೆ ಸಂಬಂಧ ಇಲ್ಲದಿರುವಾಗ ನಾನೇ ಮಾಡುತ್ತಿದ್ದೇನೆಂದು ಜೀವಿಯು ಅಂದುಕೊಳ್ಳುವುದು, ಅಹಮ್‌ವೊಂದರ ಮಾತನ್ನು ನಿಜವಾ ಅಲ್ಲವಾ ಎಂದು ನೋಡದೆ ಜೀವಿಯು ಕುರುಡನಂತೆ ನಂಬುವುದು ಏಕೆ ನಡೆಯುತ್ತಿದೆಯೆಂದು ಯೋಚಿಸಿ ನೋಡಿದರೂ, ಜೀವಿಗೆ ಸತ್ಯವೇನು? ಅಸತ್ಯವೇನೆಂದು ತಿಳಿದುಕೊಳ್ಳುವ ವಿಚಕ್ಷಣ ದೃಷ್ಠಿ ಇಲ್ಲವೆಂದು ತಿಳಿಯುತ್ತಿದೆ. ಅಜ್ಞಾನ ಅಂಧತ್ವದಿಂದಿರುವ ಜೀವಿಯು ಪಕ್ಕದಲ್ಲಿಯೇ ಇರುವ ಅಹಮ್ ಮೇಲೆ ಆಧಾರಪಡುತ್ತಿದ್ದಾನೆ. ಆಹಮ್‌ವೊಂದರ ಕೆಲಸ ಇರುವುದು

ಇಲ್ಲದಂತೆ, ಇಲ್ಲದಿರುವುದು ಇರುವಂತೆ ಹೇಳುವುದೇ ಆದ್ದರಿಂದ, ಜೀವಿಗೆ ಸಂಬಂಧವಿಲ್ಲದ ವಿಷಯವನ್ನು ಸಂಬಂಧವೇರ್ಪಡಿಸಿ ಅಹಮ್ ಹೇಳುತ್ತಿದೆ. ಅಜ್ಞಾನವೆಂಬ ಕುರುಡತನವಿರುವ ಜೀವಿಯು ಅಹಮ್ ಮೇಲೆ ಆಧಾರಬಿದ್ದು ಅದು ಹೇಳಿರುವುದು ನಿಜವೇ ಎಂದು ನಂಬುತ್ತಿದ್ದಾನೆ.

ಜ್ಞಾನ ದೃಷ್ಟಿ ಹೊಂದಿದ ಜೀವಿಯು ಅಹಮ್ ಮೇಲೆ ಆಧಾರಬೀಳುವುದಿಲ್ಲ. ಕಾರ್ಯಕ್ಕೆ ಕಾರಣ ಮೂಲವು ಕರ್ಮವೆಂದು, ಅದರ ಪ್ರೇರಣೆಯಲ್ಲಿ ಮನಸ್ಸು, ಬುದ್ಧಿ, ಚಿತ್ತ, ಗುಣಗಳನ್ನು ಉಪಯೋಗಿಸಿಕೊಂಡು ಕಾರ್ಯವನ್ನು ಮಾಡುತ್ತಿವೆಯೆಂದು, ಜೀವಿಯಾದ ತನಗೆ ಕಾರ್ಯದಲ್ಲಿನ ಅನುಭವ ಹೊರತು ಇತರೆ ಸಂಬಂಧವೇನು ಇಲ್ಲವೆಂದು ತನ್ನ ಜ್ಞಾನದೃಷ್ಟಿಯಿಂದ ತಿಳಿದುಕೊಳ್ಳುತ್ತಿದ್ದಾನೆ. ಹಾಗಿರುವಾಗ ಅಹಮ್‌ವೊಂದರ ಮಾತನ್ನು ಅಸತ್ಯವೆಂದು ತಳ್ಳಿಹಾಕುತ್ತಿದ್ದಾನೆ. ಬಾಹ್ಯವಾಗಿ ಅಗ್ನಿ ಉರಿಯುವುದಕ್ಕೆ ಆಕ್ಸಿಜನ್ (ಪ್ರಾಣ ವಾಯುವು) ಅಗತ್ಯ. ಹಾಗೆ ಅಗ್ನಿ ಆರಿಹೋಗುವುದಕ್ಕೆ ಕಾರ್ಬನ್ ಡೈ ಆಕ್ಸೈಡ್ ಅಗತ್ಯ. ಆಕ್ಸಿಜನ್ ಇರುವಾಗಲೇ ಬೆಂಕಿ ಉರಿಯುತ್ತಿದೆ. ಆ ವಿಧವಾಗಿಯೇ ಅಹಮ್ ಕೆಲಸ ಮಾಡದಿರುವಾಗಲೇ ಜ್ಞಾನಾಗ್ನಿಯ ಬೆಂಕಿ ಪ್ರಕಾಶವಾಗಿ ಉರಿಯುತ್ತಿದೆ. ಕಾರ್ಬನ್ ಡೈ ಆಕ್ಸೈಡ್ ಇರುವಾಗ ಬೆಂಕಿ ನಂದುಹೋಗುವಂತೆ ಅಹಮ್‌ವೊಂದರ ಕೆಲಸ ಇದ್ದಾಗ ಜ್ಞಾನಾಗ್ನಿ ಉರಿಯದೆ ನಂದುಹೋಗುತ್ತಿದೆ. ಬಾಹ್ಯಾಗ್ನಿ ಉರಿಯುವುದಕ್ಕು, ನಂದುಹೋಗುವುದಕ್ಕು ವಾಯುವೊಂದರ ಆಕ್ಸಿಜನ್, ಕಾರ್ಬನ್ ಡೈ ಆಕ್ಸೈಡ್‌ಗಳು ಕಾರಣವಾದಂತೆ. ಶರೀರದಲ್ಲಿ ಜ್ಞಾನಾಗ್ನಿ ಉರಿಯುವುದಕ್ಕು ನಂದುಹೋಗುವುದಕ್ಕು ಅಹಮ್ ಒಂದರ ವೃತ್ತಿ ನಿವೃತ್ತಿಗಳು ಕಾರಣವಾಗುತ್ತಿವೆ. ಅಹಮ್ ವೃತ್ತಿಯಾಗಿರುವಾಗ ಜ್ಞಾನಾಗ್ನಿ ಆರಿಹೋಗಿ ಕರ್ಮಗಳನ್ನು ಸುಡಲಾರದ ಸ್ಥಿತಿಯಲ್ಲಿದೆ. ಆಗ ಸಂಭವಿಸುವ ಆಗಾಮಿಕರ್ಮ ಜೀವಿಯ ಕರ್ಮಚಕ್ರವನ್ನು ಸೇರುತ್ತಿದೆ. ಅಹಮ್ ನಿವೃತ್ತಿ ಅದಾಗ ಜ್ಞಾನಾಗ್ನಿ ಪ್ರಜ್ವಲಿಸಿ ಉರಿಯುತ್ತಾ ಕರ್ಮವನ್ನು ಸುಡುವ ಸಾಮರ್ಥ್ಯ ಹೊಂದಿದೆ. ಆಗ ಸಂಭವಿಸುವ ಆಗಾಮಿಕರ್ಮ ಜ್ಞಾನಾಗ್ನಿಯಲ್ಲಿ ಪೂರ್ತಿ ಸುಟ್ಟುಹೋಗುತ್ತಿದೆ.

ಆಗಾಮಿಕರ್ಮ ದಹನವಾಗುವುದಕ್ಕು ಮತ್ತು ಆಗದಿರುವುದಕ್ಕು ಅಹಂಕಾರವೃತ್ತಿ ನಿವೃತ್ತಿಗಳ ಮೇಲೆ ಆಧಾರಪಟ್ಟಿದೆ.

ಅಹಂಕಾರ ಶರೀರದಲ್ಲಿ ಒಂದುಬಾರಿ ಸ್ವಲ್ಪ ಸಮಯ ಇಲ್ಲದಂತೆಹೋದ ನಂತರ ಎಂದಿಗೂ ಇಲ್ಲದಂತೆ ಹೋಗುತ್ತದೆಂದುಕೊಳ್ಳಬಾರದು. ಜೀವಿಗೆ ಒಂದುಬಾರಿ ಮರಣಬಂದಷ್ಟು ಮಾತ್ರಕ್ಕೆ ಬೇರೆಕಡೆ ಹುಟ್ಟುವುದಿಲ್ಲವೆಂದು ಹೇಳಲಾರೆವು ಅಲ್ಲವೆ! ಹಾಗೆಯೇ ಅಹಮ್ ಸಹ ಒಂದು ವಿಷಯದಲ್ಲಿ ನಿವೃತ್ತಿ ಆದಷ್ಟು ಮಾತ್ರಕ್ಕೆ ಬೇರೆ ವಿಷಯದಲ್ಲಿ ಹುಟ್ಟವುದಿಲ್ಲಯೆಂದುಕೊಳ್ಳಬಾರದು. ಶರೀರ ಇರುವವರೆಗು ಅದು ಇರುತ್ತದೆ. ಅದು ಮಾತುಮಾತಿಗು ತನ್ನ ಕೆಲಸ ತಾನು ಮಾಡುತ್ತಿರುತ್ತದೆ. ಜ್ಞಾನಹೊಂದಿದ ಜೀವಿಯು ಸಹ ಮಾತುಮಾತಿಗು ಅದರ ಮಾತಿಗೆ ಕಿವಿಕೊಡದೆ ಅಹಮ್‌ನನ್ನು ನಿವೃತ್ತಿ ಮಾಡುತ್ತಲೇ ಇರಬೇಕು. ಯಾವಾಗಾದರೆ ಅಹಮ್ ಇದೆಯೋ ಆಗ ಜ್ಞಾನಾಗ್ನಿ ಇಲ್ಲ, ಆಗಾಮಿಕರ್ಮ ಇದೆ. ಯಾವಾಗಾದರೆ ಅಹಮ್ ಇಲ್ಲವೋ ಆಗ ಜ್ಞಾನಾಗ್ನಿ ಇದೆ. ಆಗಾಮಿಕರ್ಮ ಇಲ್ಲ. ಅಹಮ್‌ನ್ನನುಸರಿಸಿ ಜ್ಞಾನಾಗ್ನಿ, ಜ್ಞಾನಾಗ್ನಿಯನ್ನನುಸರಿಸಿ ಕರ್ಮ ಇದೆಯೆಂದು ತಿಳಿಯಬೇಕು. ಅಹಂಕಾರ ಇರುವಾಗ ಆಗಾಮಿಕರ್ಮ ಇದೆ. ಅಹಂಕಾರ ಇಲ್ಲದಿರುವಾಗ ಆಗಾಮಿಕರ್ಮ ಇಲ್ಲ. ಅಹಂಕಾರ ಇಲ್ಲದಿರುವಾಗ ಜ್ಞಾನಾಗ್ನಿ ಇದೆ. ಅಹಂಕಾರ ಇರುವಾಗ ಜ್ಞಾನಾಗ್ನಿ ಇಲ್ಲ. ಜ್ಞಾನಾಗ್ನಿ ಇರುವಾಗ ಆಗಾಮಿಕ ಕರ್ಮ ಸುಟ್ಟುಹೋಗುತ್ತಿದೆ. ಜ್ಞಾನಾಗ್ನಿ ಇಲ್ಲದಿರುವಾಗ ಆಗಾಮಿಕರ್ಮ ವೃದ್ಧಿ ಆಗುತ್ತಿದೆ.

ಜ್ಞಾನ ಇರುವವನು, ಶರೀರ ಯಂತ್ರಾಂಗವೆಲ್ಲವನ್ನು ತಿಳಿದವನು, ಕೆಲಸ ಮಾಡುವಾಗ ಪ್ರಾರಬ್ಧಕರ್ಮ ಪ್ರಕಾರ ಕೆಲಸ ನಡೆಯುತ್ತದೆಂದು ತಿಳಿದವನಾಗಿ, ಪ್ರಾರಬ್ಧಕರ್ಮ ಪ್ರಕಾರವೇ ಕಾಣಿಸುವ ಫಲಿತ ಬರುತ್ತದೆಂದು ತಿಳಿದು ಮಾಡುತ್ತಿರುತ್ತಾನೆ. ಫಲಿತದ ಮೇಲೆ ಆಸೆ ಇಟ್ಟುಕೊಳ್ಳದೆ ಅದನ್ನು ಪ್ರಾರಬ್ಧ ಮೊದಲೇ ನಿರ್ಣಯಿಸಿರುತ್ತದೆಂದು, ತನ್ನ ಇಷ್ಟ ಅಯಿಷ್ಟಗಳ ಮೇಲೆ ಫಲಿತ ಇರುವುದಿಲ್ಲವೆಂದು ತಿಳಿದು ಮಾಡುತ್ತಿರುತ್ತಾನೆ, ಈ ವಿಧವಾಗಿ ಫಲಿತದ

ಮೇಲೆ ಆಸೆಯಿಲ್ಲದೆ ಎಲ್ಲದಕ್ಕು ಪ್ರಾರಬ್ಧ ಕರ್ಮವೇ ಕಾರಣವೆಂದು, ಅದರ ಪ್ರಕಾರವೇ ಶರೀರ ಭಾಗಗಳೆಲ್ಲವೂ ಕೆಲಸ ಮಾಡುತ್ತಿವೆಯೆಂದು, ಶರೀರದಲ್ಲಿ ತಾನೊಂದು ಭಾಗವೆಂದು, ತನ್ನ ಕೆಲಸ ಕಷ್ಟಸುಖಗಳು ಅನುಭವಿಸುವುದೇ ಎಂದು ತಿಳಿದಿರುತ್ತದೆ. ಹಾಗೆ ತಿಳಿದು ನಿಮಿತ್ತನಾಗಿ ಕಾರ್ಯಗಳು ಮಾಡುವವನನ್ನು ಕರ್ಮಯೋಗಿ ಎನ್ನುತ್ತೇವೆ. ಅವನಲ್ಲಿ ಜ್ಞಾನಾಗ್ನಿಯಿದ್ದು ಆಗಾಮಿಕರ್ಮ ಬರದಂತೆ ಸುಟ್ಟು ಬೂದಿಯನ್ನು ಮಾಡುತ್ತಿದೆ. ಕರ್ಮಗಳ ಬೂದಿಯನ್ನು ಹೊಂದಿರುವವನಾದ್ದರಿಂದ ಸನ್ಯಾಸಿ ಎನ್ನುತ್ತಿದ್ದೇವೆ. ಸನ್ಯಾಸಿ ಹತ್ತಿರ ಬೂದಿ ಹೊರತು ಏನಿರುತ್ತದೆಂದು ಮಾತಿನ ಸಂದರ್ಭದಲ್ಲಿ ಅನ್ನುತ್ತಿರುತ್ತೇವೆ ಅಲ್ಲವೆ! ಸನ್ಯಾಸಿ ಎಂದರೇ ಕರ್ಮಯೋಗಿಯೆಂದು, ಬೂದಿ ಎಂದರೇ ಕರ್ಮ ಸುಟ್ಟು ಹೋಗಿದೆಯೆಂದು ಯಾರೂ ಅಂದುಕೊಳ್ಳುವುದಿಲ್ಲ. ಹೊರಗೆ ಕಾಣಿಸುವ ಬೂದಿ ಇಲ್ಲದಿದ್ದರೂ ಅವನ ಹತ್ತಿರ ಬೂದಿ ಹೊರತು ಏನಿದೆ ಎನ್ನುವುದು ವಿಚಿತ್ರವೇ ಅಲ್ಲವೆ!

ಇದಕ್ಕಿಂತ ಮತ್ತೊಂದು ದೊಡ್ಡ ವಿಚಿತ್ರವೇನೆಂದರೇ **"ನನಿರಗ್ನಿ, ಅಗ್ನಿಯಿಲ್ಲದವನು"** ಎಂದು ಮೇಲಿನ ಶ್ಲೋಕದಲ್ಲಿ ಹೇಳಿದಾಗ, ಬಾಹ್ಯವಾಗಿರುವ ಅಗ್ನಿಯಿಂದ ಯಜ್ಞಯಾಗಾದಿಗಳು ಮಾಡದವನು ಎಂದು ಅರ್ಥ ಹೇಳುವುದು ಮತ್ತಷ್ಟು ವಿಚಿತ್ರ ಅಲ್ಲವೆ! ಜ್ಞಾನಾಗ್ನಿಗೆ ಎಷ್ಟೋ ಚರಿತ್ರೆ ಇರುವಾಗ ಅದನ್ನು ಸ್ವಲ್ಪವಾದರೂ ವಿವರಿಸದೆ, ಬಾಹ್ಯ ಅಗ್ನಿಯನ್ನು ಹೋಲಿಸಿ ಹೇಳುವುದು ಎಷ್ಟರಮಟ್ಟಿಗೆ ಸಮಂಜಸವಾದ ಕೆಲಸವೋ ನೀವೇ ಯೋಚಿಸಿರಿ. ಕರ್ಮ ಫಲದ ಮೇಲೆ ಆಸೆ ಇಲ್ಲದೆ ಕಾರ್ಯಗಳು ಮಾಡುವವನು ನಿಜವಾದ ಸನ್ಯಾಸಿ, ನಿಜವಾದ ಯೋಗಿ ಎಂದು ಶ್ಲೋಕದಲ್ಲಿ ಹೇಳಲ್ಪಟ್ಟಿದೆ. ಇದಕ್ಕೆ ಅರ್ಥ ಶರೀರ ಯಂತ್ರಾಂಗವೆಲ್ಲವೂ ತಿಳಿದು, ಸರ್ವಕಾರ್ಯಗಳಿಗು ಪ್ರಾರಬ್ಧ ಕಾರಣವೆಂದು, ಫಲಿತ ಸಹ ಅದರ ನಿರ್ಣಯವೇಯೆಂದು ತಿಳಿದವನು, ನಿಜವಾದ ಯೋಗಿ ಎಂದು ತಿಳಿಯಬೇಕು. ಹಾಗೆಯೇ ಅಗ್ನಿ ಇಲ್ಲದಂತಹವನು, ಕೆಲಸಗಳನ್ನು ಮಾಡದಿರುವವನು ಸನ್ಯಾಸಿಯಲ್ಲ, ಯೋಗಿಯಲ್ಲ ಎನ್ನುವುದರಲ್ಲಿ ಅರ್ಥ

ಜ್ಞಾನಾಗ್ನಿ ಇಲ್ಲದವನೆಂದು, ಕೆಲಸಗಳು ಮಾಡುವುದರಿಂದ ಕರ್ಮ ಬರುತ್ತದೆಂದು ಭಯಪಟ್ಟು ಕೆಲಸಗಳು ಮಾಡದವನೆಂದು ಅರ್ಥ. ಮೇಲಿನ ಶ್ಲೋಕದಲ್ಲಿ **"ಫಲಿತದ ಮೇಲೆ ಆಸೆ ಇಟ್ಟುಕೊಳ್ಳದೆ ಕಾರ್ಯಗಳು ಮಾಡಬೇಕೆಂದು ತಿಳಿದು ಮಾಡುವವನು ನಿಜವಾದ ಸನ್ಯಾಸಿ ನಿಜವಾದ ಯೋಗಿ, ಅಗ್ನಿ ಇಲ್ಲದಂತಹವನು, ಕೆಲಸಗಳು ಮಾಡದವನು ಸನ್ಯಾಸಿ ಅಲ್ಲ. ಯೋಗಿಯು ಅಲ್ಲ."** ಎಂಬ ವಿಷಯ ಬರೆಯಲ್ಪಟ್ಟ ವಿವರದಲ್ಲಿ ಪೂರ್ತಿ ಅರ್ಥವಾಗಿದೆ ಅಂದುಕೊಳ್ಳುತ್ತೇವೆ.

ಈ ಶ್ಲೋಕದಲ್ಲಿನ ಭಾವನೆಯಲ್ಲಿ ಎಲ್ಲಿಯಾದರೂ ಗಡ್ಡವನ್ನು ಕುರಿತು ಹೇಳಿದ್ದಾರಾ? ಇದನ್ನು ಓದಿದ ನಂತರ ಸನ್ಯಾಸತ್ವ ಎಂದರೆ ಪೂರ್ತಿ ಕರ್ಮಯೋಗ ಎಂದು ಅರ್ಥವಾಗುತ್ತಿದೆ. ಮುಖ್ಯವಾಗಿ ಕೆಲಸಗಳನ್ನು ಬಿಟ್ಟವನಾಗಲಿ, ಜ್ಞಾನಾಗ್ನಿ ಇಲ್ಲದವನಾಗಲಿ ಸನ್ಯಾಸಿ ಅಲ್ಲ ಎಂದು ಹೇಳಿದ್ದಾರೆ. **"ನನಿ ರಗ್ನಿ ನಚಾಕ್ರಿಯಃ"** ಎಂಬ ಮಾತನ್ನು ಮರೆತುಹೋಗಿ ಈದಿನ ಇರುವ ಸನ್ಯಾಸಿಗಳು ಕಾಷಾಯ ವಸ್ತ್ರಗಳಿಗೆ, ಗಡ್ಡ, ಜುಟ್ಟು ಬೆಳೆಸುವುದಕ್ಕೆ ಅಭ್ಯಾಸವಾಗಿ **"ತಾನು ಕೆಟ್ಟ ಕೋತಿ ವನವೆಲ್ಲ ಕೆಡಿಸಿತು"** ಎನ್ನುವಂತೆ ತಾನು ಸನ್ಯಾಸಿ ಆಗುವುದಲ್ಲದೆ ಉಳಿದವರನ್ನು ಸಹ ಹಾಗೆಯೇ ಇರಬೇಕೆಂದು ಹೇಳುತ್ತಿದ್ದಾರೆ. ಮುಸ್ಲಿಮ್‌ರ ಗಡ್ಡಗಳನ್ನು ಕುರಿತು ಅಂತಿಮ ದೈವಗ್ರಂಥವಾದ ಖುರ್‌ಆನ್‌ನಲ್ಲಿ ಯಾವ ವಿಧವಾಗಿ ಇಲ್ಲವೋ ಅದೇ ವಿಧವಾಗಿ ಪ್ರಥಮ ದೈವಗ್ರಂಥದಲ್ಲಿ ಹಿಂದೂಗಳ ಗಡ್ಡಗಳನ್ನು ಕುರಿತು ಸಹ ದೇವರು ಏನು ಹೇಳಲಿಲ್ಲ. ತಾನು ಸನ್ಯಾಸಿಯೆಂದು ತಿಳಿಯುವುದಕ್ಕೆ ಹೊರಗೆ ಗುರುತುಗಳು ಏನು ಇರುವುದಿಲ್ಲ. ಆದರೆ ಈದಿನ ಸನ್ಯಾಸಿಗಳನ್ನು ಸುಲಭವಾಗಿ ಗುರುತು ಹಿಡಿಯುವುದಕ್ಕೆ ಧರಿಸಿದ ಕಾಷಾಯ ಬಟ್ಟೆಗಳು, ಬೆಳೆಸಿದ ಗಡ್ಡಗಳು ಚೆನ್ನಾಗಿ ಕಾಣಿಸುತ್ತಿವೆ. ದೇವರು ಹೇಳಿದ ವಿಧಾನವನ್ನು ಬಿಟ್ಟು ದೇವರು ಹೇಳದ ವಿಧಾನವನ್ನು ಆಚರಿಸುವವನು ತಾವು ಮಾಡುತ್ತಿರುವುದು ತಪ್ಪೆಂದು ಸ್ವಲ್ಪವೂ ಸಹ ಸಂಕೋಚಿಸದೆ ಇತರರನ್ನು ಸಹ ನೀನು ನನ್ನಂತೆ ಏಕೆ ಇಲ್ಲ? ಎಂದು ಪ್ರಶ್ನಿಸುತ್ತಾ, ಸರಿಯಾದ ಸನ್ಯಾಸಿಯನ್ನು ನೋಡಿ ನೀನು ಸನ್ಯಾಸಿಯೇ ಅಲ್ಲವೆನ್ನುತ್ತಿದ್ದಾರೆ. ಈ ವಿಧವಾಗಿ ಸನ್ಯಾಸಿ

ಗಳಾದವರಿಗೆ ಸನ್ಯಾಸತ್ವದ ಬಗ್ಗೆ ತಿಳಿಯದಂತೆ ಹೋಗಿದೆ. ಹಾಗೆಯೇ ಮಹರ್ಷಿಗಳಿಗು ಸಹ ತಮ್ಮ ಘನತೆಯನ್ನು ಕುರಿತು ತಮಗೇ ತಿಳಿಯದಂತೆ ಹೋಗಿದೆ.

ಮನುಷ್ಯರಲ್ಲಿ ದೈವಶಕ್ತಿ ಇರುವವರನ್ನು ಎಂದರೇ ಜ್ಞಾನಾಗ್ನಿ ಇರುವವರನ್ನು, ಅವರಲ್ಲಿನ ಅಗ್ನಿಯನ್ನನುಸರಿಸಿ ಅಗ್ನಿವೊಂದರ ಸಾಂಧ್ರತೆಯನ್ನು, ನಿಲುವಿಕೆಯನ್ನನುಸರಿಸಿ ಆ ಮನುಷ್ಯನಿಗೆ ಯೋಗ್ಯತಾ ಹೆಸರುಗಳಿರುತ್ತವೆ. ಸ್ವಲ್ಪ ಜ್ಞಾನಶಕ್ತಿ ಇರುವವನನ್ನು ಮಹರ್ಷಿ ಎಂದು ಹೇಳುವುದು ನಡೆಯುತ್ತಿದೆ. 25 ಪೈಸೆಗಳ ಜ್ಞಾನಾಗ್ನಿ ಇರುವವನಿಗೆ **ಮಹರ್ಷಿ** ಎಂದು ಹೆಸರು ಬಂದರೆ, 50 ಪೈಸೆಗಳಷ್ಟು ಜ್ಞಾನಾಗ್ನಿ ಇರುವವನನ್ನು **ರಾಜರ್ಷಿ** ಎಂದು ಹೇಳುವುದು ನಡೆಯುತ್ತಿದೆ. 75 ಪೈಸೆಗಳಷ್ಟು ಜ್ಞಾನಾಗ್ನಿ ಇರುವವನನ್ನು **ದೇವರ್ಷಿ**ಯೆಂದು ಹೇಳಬಹುದು 100 ಪೈಸೆಗಳಷ್ಟು ಜ್ಞಾನಾಗ್ನಿ ಇರುವವನನ್ನು **ಬ್ರಹ್ಮರ್ಷಿ**ಯೆಂದು ಹೇಳಬಹುದು. ಯಾವುದೆ ಜ್ಞಾನಶಕ್ತಿ ಇಲ್ಲದೆ ಜ್ಞಾನಾಗ್ನಿ ಇಲ್ಲದ ಮನುಷ್ಯನನ್ನು ಬೇವರ್ಷಿ ಎಂದು ಹೇಳಬಹುದು. ಈಗಿನ ಕಾಲದಲ್ಲಿ ಭೂಮಿಮೇಲಿರುವ ಮನುಷ್ಯರಲ್ಲಿ ಮಹರ್ಷಿಗಳು ಅಪರೂವಾಗಿರುತ್ತಾರೆ. ಉಳಿದವರೆಲ್ಲರೂ ಬೇವರ್ಷಿಗಳಾಗಿಯೇ ಇರುತ್ತಾರೆ. ಮಹರ್ಷಿಯನ್ನು ಮೀರಿದ ಘನತೆ ರಾಜರ್ಷಿ. ಈಗ ರಮಾಣಾನಂದ ಸ್ವಾಮಿಯವರು ತನ್ನನ್ನು ಒಂದುಬಾರಿ ಮಹರ್ಷಿಯೆಂದು ಹೇಳುವುದು, ಮತ್ತೊಂದುಬಾರಿ ರಾಜರ್ಷಿಯೆಂದು ಹೇಳುವುದು ನೋಡಿದರೆ ಆತನು ಮಹರ್ಷಿಯಾ ಅಥವಾ ರಾಜರ್ಷಿಯಾ ಎಂಬ ಸಂದಿಗ್ಧದಲ್ಲಿ ಬೀಳಬೇಕಾಗಿ ಬರುತ್ತಿದೆ. ಈದಿನ ಭೂಮಿ ಮೇಲೆ ಬಹಳಮಟ್ಟಿಗೆ ಜ್ಞಾನಾಗ್ನಿಯ ಬಗ್ಗೆ ಇರುವ ಸ್ಥಾನಗಳು ಬಹುಶಃ ತಿಳಿದಿಲ್ಲವೆಂದೇ ಹೇಳಬೇಕು. ಸಾಮಾನ್ಯ ಪ್ರಜೆಗಳು ಬೇವರ್ಷಿಗಳಾದರೂ ಫರವಾಗಿಲ್ಲ. ಸನ್ಯಾಸಿಗಳಾದವರು ಕನಿಷ್ಟ **ಮಹರ್ಷಿ** ಸ್ಥಾನದಲ್ಲಾದರೂ ಇರಬೇಕೆಂದು ಕೋರುತ್ತಿದ್ದೇವೆ. ಇನ್ನೂ ಮುಂದಕ್ಕೆ ಹೋಗಿ ಜ್ಞಾನಶಕ್ತಿಯನ್ನು ಹೆಚ್ಚಾಗಿ ಸಂಪಾದಿಸಿ **ರಾಜರ್ಷಿ, ದೇವರ್ಷಿ, ಬ್ರಹ್ಮರ್ಷಿ** ಪದವಿಗಳನ್ನು ಸಂಪಾದಿಸಿಕೊಳ್ಳುತ್ತೇವೆಂದರೇ ನಮಗೆ ಮತ್ತಷ್ಟು ಸಂತೋಷ.

ಸಾಯಿಬಾಬಾನನ್ನು ಈದಿನ ಎಷ್ಟೋ ಜನ ದೇವರಿಗೆ ಸಮಾನವಾಗಿ ಭಾವಿಸಿ ಆರಾಧಿಸುವುದು ನಡೆಯುತ್ತಿದೆ. ಹಾಗೆ ಪ್ರಜೆಗಳು ಆರಾಧಿಸುವುದರಿಂದ ಯಾರಿಗೆ ಯಾವ ನಷ್ಟ ಇಲ್ಲ. ನಮಗೆ ಬರಬೇಕಾದ ಆದಾಯವನ್ನು ಇತರರಿಗೆ ಅಂದರೇ ಸಾಯಿಬಾಬಾಗೆ ಹೋಗುತ್ತದೆಂಬ ಅಸೂಯೆ ಭಾವನೆಯಿಂದಲೂ, ತಮಗೆ ಬರಬೇಕಾದ ಗೌರವವನ್ನು ಪ್ರಜೆಗಳು ಸಾಯಿಬಾಬಾಗೆ ಕೊಡುತ್ತಿದ್ದಾರೆಂಬ ದ್ವೇಷ ಭಾವನೆಯಿಂದಲೂ ಕರ್ನಾಟಕದಿಂದ ವಿಶಾಖಪಟ್ಟಣದವರೆಗು ಬಂದು ಗೋವಿಂದಾನಂದ ರಮಣಾನಂದನೊಂದಿಗೆ ವಾದಿಸುವುದು ನಡೆಯುತ್ತಿದೆ. ವಾದನೆಯಿಂದ ಯಾರನ್ನು ಬದಲಾಯಿಸಲಾರೆವು. ಯಾರ ಬುದ್ಧಿ ವಾದನೆಯಿಂದ ಬದಲಾಗುವುದಿಲ್ಲ. ಇತರರ ಬುದ್ಧಿಯನ್ನು ಬದಲಾಯಿಸಬೇಕೆಂದರೇ, ಅವರದು ಕೆಟ್ಟ ದಾರಿಯಾದರೆ ಅದನ್ನು ಅಲ್ಲವೆಂದು ಒಳ್ಳೆಯ ದಾರಿಯೊಳಗೆ ಮರಳಿಸುವುದಕ್ಕೆ ವಾದನೆಗಳು ಕೆಲಸಕ್ಕೆ ಬರುವುದಿಲ್ಲ. ವಾದನೆಗಳಿಂದ ಅಸೂಯೆಗಳು ಬೆಳೆಯುತ್ತವೆ ಹೊರತು ಲಾಭವೇನು ಇರುವುದಿಲ್ಲ. ಎಂತಹ ಕೆಟ್ಟ ಮಾರ್ಗವನ್ನಾದರೂ ಬಿಡಿಸುವುದಕ್ಕೆ ಜ್ಞಾನವನ್ನು ವಿವರವಾಗಿ ಹೇಳಿ ಬಿಡಿಸಬಹುದು. ಜ್ಞಾನದಿಂದಲೇ ಏನನ್ನಾದರೂ ಪರಿಷ್ಕಾರ ಮಾಡಬಹುದು.

**ಪ್ರಶ್ನೆ :– (ಗೋವಿಂದಾನಂದ) ನಿಮಗೆ ಗುರು ಪರಂಪರೆ ಇಲ್ಲ. ನೀವು ಸನಾತನ ಧರ್ಮವನ್ನು ಅಂಗೀಕರಿಸುತ್ತಿಲ್ಲ. ನೀವು ಸನಾತನ ಧರ್ಮವನ್ನು ಆಚರಿಸುತ್ತಿಲ್ಲ.**

**ನನ್ನ ಉತ್ತರ :–** ಸನಾತನ ಧರ್ಮ ಎಂಬಮಾತನ್ನು ನಾನು ಅನೇಕಬಾರಿ ಬಹಳಜನ ಸ್ವಾಮೀಜಿಗಳು ಹೇಳುತ್ತಿರುವಾಗ ಕೇಳಿದ್ದೇನೆ. ನಾನು ಸ್ವಲ್ಪ ಜ್ಞಾನವನ್ನು ತಿಳಿದವನೇ ಆದರೂ ಬಹಳಜನ ಸ್ವಾಮೀಜಿಗಳು ಹೇಳುವ ಸನಾತನ ಧರ್ಮ ಎಂದರೇ ಏನೋ ನನಗೆ ಅವಗಾಹನೆಗೆ ಬರಲಿಲ್ಲ. ನೂರರಷ್ಟು ಪ್ರಜೆಗಳಲ್ಲಿ 95 ರಷ್ಟು ಜ್ಞಾನವೆಂದರೇ ಏನೋ, ದೇವರೇಂದರೇ ಏನೋ ತಿಳಿಯದವರೇ ಇದ್ದಾರೆ. ಉಳಿದ 5 ರಷ್ಟು ಮನುಷ್ಯರಲ್ಲಿ ಜ್ಞಾನದ ಮೇಲೆ ಆಸಕ್ತಿ ಹೊಂದಿರುವಾಗ ಅವರಲ್ಲಿ ಸಾವಿರಮನೆಗೆ ಒಬ್ಬನು ಅಪರೂಪವಾಗಿ ಸ್ವಾಮೀಜಿಗಳಾಗಿ ಬದಲಾಗಿದ್ದಾರೆ. ಹಾಗೆ ಬದಲಾದವರಲ್ಲಿ ಕೆಲವರು ಸನ್ಯಾಸಿಗಳಾಗಿರುವಾಗ,

ಕೆಲವರು ಗುರುಗಳಾಗಿ, ಸ್ವಾಮೀಜಿಗಳಾಗಿ ವ್ಯವಹರಿಸುತ್ತಿದ್ದಾರೆ. ಇವರಲ್ಲಿ ಬಹಳಜನ ಸನಾತನ ಧರ್ಮವನ್ನು ಆಚರಿಸಬೇಕೆನ್ನುವವರು ಕೆಲವರಿದ್ದಾರೆ. ನಮ್ಮದು ಸನಾತನ ಧರ್ಮ ಎಂದು ಹೇಳುವವರು ಕೆಲವರಿದ್ದಾರೆ. ಅವರೆಲ್ಲರೂ ಸನಾತನ ಧರ್ಮವನ್ನು ಆಚರಿಸುವವರಾಗಿಯೇ ಹೇಳಿಕೊಳ್ಳುತ್ತಿದ್ದಾರೆ. ಅಂತವರು ಕೆಲವು ಸಭೆಗಳಲ್ಲಿ ಹಿಂದೂತ್ವವನ್ನು ದೊಡ್ಡದಾಗಿ ಹೇಳುತ್ತಾ ಹಿಂದೂಗಳದು ಸನಾತನ ಧರ್ಮವೆಂದು ಹೇಳುತ್ತಿರುತ್ತಾರೆ. ಹೀಗೆ ಅನೇಕ ಸಂದರ್ಭಗಳಲ್ಲಿ ಸನಾತನ ಧರ್ಮ ಎಂಬಮಾತನ್ನು ಬಹಳಜನ ಸ್ವಾಮೀಜಿಗಳ ಮಾತುಗಳಲ್ಲಿ ಕೇಳಿದ್ದೇನೆ. ಇಷ್ಟುಜನ ಸನಾತನ ಧರ್ಮವನ್ನು ಹೇಳುತ್ತಿರುವಾಗ, ಅವರು ಆಚರಿಸುವುದು ಅದೇನೋ ನನಗೆ ಮಾತ್ರ ಅರ್ಥವಾಗಲಿಲ್ಲ.

ನನಗಿರುವ ಜ್ಞಾನದ ಪ್ರಕಾರ ನಾನು ಯೋಚಿಸಿದಾಗ ಹಾಗೆ ಹೇಳುವ ಸ್ವಾಮೀಜಿಗಳೆಲ್ಲರಿಗೂ ಸನಾತನ ಧರ್ಮವನ್ನು ಪಕ್ಕಕ್ಕಿಟ್ಟು, ಬರೇ ಧರ್ಮವೂ ಸಹ ಅವರಿಗೆ ತಿಳಿದಿಲ್ಲವೆಂದು ಅರ್ಥವಾಗಿದೆ. ಅವರು ಹೇಳುವ ಮಾತುಗಳ ಡಾಂಭಿಕವಾದವುಗಳೇ ಹೊರತು ಅವರಿಗೆ ಸನಾತನ ಧರ್ಮವೇನೋ ತಿಳಿದಿಲ್ಲವೆಂದೇ ಹೇಳಬಹುದು. ಸನಾತನ ಎಂದರೇ ಹಿಂದಿನ ಕಾಲದಿಂದ ಬಂದಿರುವುದೆಂದು ಅರ್ಥ ಅಥವಾ ಪೂರ್ವದಲ್ಲಿ ಹೇಳಲಾಗಿದೆಯೆಂದು ಅರ್ಥ. ಪೂರ್ವಸೃಷ್ಠಿ ಆದಿಯಲ್ಲಿ ದೇವರು ತನ್ನ ಆಕಾಶ ಭೂತದ ಮುಖಾಂತರ ಮೊಟ್ಟಮೊದಲು ಹೇಳಿರುವುದೇ ಮೊದಲ ಜ್ಞಾನ. ಅದನ್ನೇ ಸನಾತನ ಧರ್ಮ ಎಂದು ಹೇಳಬಹುದು. ಆಕಾಶ ಹೇಳಿದ ಜ್ಞಾನ ಮನುಷ್ಯರಿಗೆ ಅರ್ಥ ಆಗಲಿಲ್ಲವೆಂದು, ದೇವರೇ ಮನುಷ್ಯನ ರೂಪವಾಗಿ ಬಂದು ಪೂರ್ವದಲ್ಲಿ ಆಕಾಶವಾಣಿ ಮೂಲಕ ಹೇಳಿದ ಜ್ಞಾನವನ್ನು ವಿವರವಾಗಿ ಎಲ್ಲರಿಗೂ ಅರ್ಥವಾಗುವಂತೆ ಹೇಳಿಹೋಗಿದ್ದಾನೆ, ದ್ವಾಪರಯುಗದಲ್ಲಿ ಕೃಷ್ಣ ಭಗವಾನನು ಭಗವದ್ಗೀತೆ ರೂಪದಲ್ಲಿ ಹೇಳಿದ ಜ್ಞಾನ ಸನಾತನ ಧರ್ಮದಿಂದ ಕೂಡಿಕೊಂಡಿರುವುದೇಯೆಂದು ತಿಳಿಯುತ್ತಿದೆ. ಆದರೆ ಭಗವಂತನಾಗಿ ಬಂದ ದೇವರು ಸನಾತನ ಧರ್ಮವನ್ನು ಕುರಿತು ಭಗವದ್ಗೀತೆ ರೂಪದಲ್ಲಿ ಹೇಳಿದ

ಜ್ಞಾನ ಇಲ್ಲಿಗೆ ಸುಮಾರು ಐದುಸಾವಿರ ವರ್ಷಗಳಿಗಿಂತ ಮೇಲಾಗಿದೆ. ಆದರೂ ಅದರಲ್ಲಿ ಹೇಳಿದ ಧರ್ಮಗಳು ಯಾವೋ, ಅಧರ್ಮಗಳು ಯಾವೋ ತಿಳಿಯದ ಸ್ಥಿತಿಯಲ್ಲಿ ಸ್ವಾಮಿಗಳು ಸಹಿತ ಇದ್ದಾರೆಂದರೇ ಆಶ್ಚರ್ಯಪಡಬೇಕಾಗಿಲ್ಲ. ಭಗವದ್ಗೀತೆಯಲ್ಲಿ ಭಗವಂತನು ಹೇಳಿದ ಜ್ಞಾನ ಸನ್ಯಾಸಿಗಳಾಗಿರುವವರಿಗು, ಸ್ವಾಮಿಗಳಾಗಿ ಚಲಾವಣೆ ಆಗುವವರಿಗೇ ಅರ್ಥವಾಗಲಿಲ್ಲ ಎಂದರೇ ಸಾಧಾರಣ ಮನುಷ್ಯರಿಗೆ ಅರ್ಥವಾಗಿದೆಯೆಂದು ಹೇಳುವುದಕ್ಕೆ ಸಾಧ್ಯವಿಲ್ಲ.

ಈ ದಿನ ಉಪನ್ಯಾಸ ವೇದಿಕೆಗಳ ಮೇಲೆ 'ಸನಾತನ ಧರ್ಮ' ಎಂದು ಗಂಟಲು ಹೋಗುವಂತೆ ಅರಚುವವರಿಗೆ ಭಗವದ್ಗೀತೆಯಲ್ಲಿನ ಒಂದು ಧರ್ಮವಾಗಲಿ ಅರ್ಥವಾಗಲಿಲ್ಲ. ಹಾಗೆಯೇ ಒಂದು ಅಧರ್ಮವಾಗಲಿ ಅರ್ಥವಾಗಲಿಲ್ಲ. ಈ ನನ್ನ ಮಾತುಗಳು ಕೇಳುವವರು ಕೆಲವರು ಎಲ್ಲರಿಗೂ ಅರ್ಥವಾಗಲಿಲ್ಲಯೆಂದು ನೀವು ಹೇಗೆ ಹೇಳುತ್ತಿದ್ದೀರಾ? ಯಾವ ಆಧಾರದಿಂದ ಹೇಳುತ್ತಿದ್ದೀರೆಂದು ಕೇಳಬಹುದು. ಅದಕ್ಕೆ ನನ್ನ ಉತ್ತರ ಏನೆಂದರೇ! ಭಗವದ್ಗೀತೆ ಯಲ್ಲಿ ಹೇಳಿದ ಧರ್ಮಗಳನ್ನು ಯಾರೂ ಆಚರಿಸದೆ, ಅದೇ ಭಗವದ್ಗೀತೆಯಲ್ಲಿ ಇವು ಧರ್ಮಗಳೆನ್ನುವಂತೆ ಇವುಗಳಿಂದ ದೇವರು ತಿಳಿಯುವುದಿಲ್ಲವೆಂದು ಹೇಳಿದರೂ, ಆ ಮಾತನ್ನು ಲೆಕ್ಕಮಾಡದೆ ಯಾವ ಕೆಲಸಗಳಾದರೆ ದೇವರಬಗ್ಗೆ ಸರಿಹೋಗುವುದಿಲ್ಲವೆಂದು ಹೇಳಿದ್ದಾರೋ ಅವುಗಳನ್ನೇ ಸ್ವಾಮೀಜಿಗಳು, ಗುರುಗಳೆನ್ನುವವರು ಎಲ್ಲರೂ ಆಚರಿಸುತ್ತಿದ್ದಾರೆ. ಯಾವ ಕ್ರಿಯೆಗಳಿಂದ ದೇವರು ತಿಳಿಯುವುದಿಲ್ಲವೆಂದು ಹೇಳಿದ್ದಾನೋ ಅದೇ ಕ್ರಿಯೆಗಳನ್ನೇ ಪ್ರಾಮುಖ್ಯವಾಗಿ ಆಚರಿಸುತ್ತಿದ್ದಾರೆ. ಇದರಿಂದ ಇವರೆಲ್ಲರಿಗೂ ಭಗವದ್ಗೀತೆ ಅರ್ಥವಾಗಲಿಲ್ಲವೆಂದೇ ನಿರೂಪಣೆಯಾಗಿ ತಿಳಿಯುತ್ತಿದೆ.

ಸೃಷ್ಠಿ ಆದಿಯಲ್ಲಿ ಹೇಳಲಾದ ಜ್ಞಾನವನ್ನು ಅಥವಾ ಧರ್ಮಗಳನ್ನು ಆಚರಿಸುವುದರಿಂದ ಸನಾತನ ಧರ್ಮಗಳನ್ನು ಆಚರಿಸಿದಂತಾಗುತ್ತದೆ ಆದರೆ, ಮೊದಲು ಹೇಳಿದ ಜ್ಞಾನವನ್ನು ಆಚರಿಸದವರು ಸನಾತನ ಧರ್ಮವನ್ನು ಹೇಗೆ ಆಚರಿಸಿದವರಾಗುತ್ತಾರೆ? ಸೃಷ್ಠಿ ಆದಿಯಲ್ಲಿ ಹೇಳಿದ ಜ್ಞಾನ ಒಂದೇವೊಂದು

ಭಗವದ್ಗೀತೆ ಜ್ಞಾನವೆಂದು ಎಲ್ಲರಿಗೂ ತಿಳಿದಿದೆ. ಆ ಭಗವದ್ಗೀತೆಯಲ್ಲಿ ಹೇಳಿದ ಧರ್ಮಗಳೇ ಸನಾತನ ಧರ್ಮಗಳು ಆದರೆ ಅವುಗಳನ್ನು ಆಚರಿಸಿದವರು ಸನಾತನ ಧರ್ಮಗಳನ್ನು ಆಚರಿಸಿದಂತಾಗುತ್ತದೆ. ಇಲ್ಲಿಯವರೆಗು ತಮ್ಮ ಮಾತುಗಳಲ್ಲಿ ಸನಾತನ ಧರ್ಮಗಳೆಂದು ಏನೊ ಹಕ್ಕಾಗಿ ಹೇಳುವವರಿಗೆಲ್ಲ ಆ ಸನಾತನವಾದ ಧರ್ಮಗಳಾವೋ ಕನಿಷ್ಟ ಒಂದು ಸಹ ತಿಳಿದಿಲ್ಲವೆಂದೇ ಹೇಳಬಹುದು. ಬಿಕಾರಿಯಾದವನು ತಾನು ಕೋಟಿಶ್ವರನೆಂದು ಹೇಳಿಕೊಂಡಂತೆ, ತನಗೆ ಸನಾತನವಾದ ಧರ್ಮಗಳ ಇರುವಿಕೆ ಸಹ ತಿಳಿಯದವರು ಸನಾತನ ಧರ್ಮಗಳನ್ನು ಎಲ್ಲರೂ ಆಚರಿಸಿರೆಂದು ಹೇಳುತ್ತಿದ್ದಾರೆ. ನಾನು ಕೆಲವರನ್ನು ಸನಾತನ ಧರ್ಮವೆಂದರೇ ಏನೆಂದು ಪ್ರಶ್ನಿಸಿದ್ದೇನೆ ಅದಕ್ಕೆ ಬಹಳಜನ ಬಹಳ ವಿಧಗಳಾದ ಉತ್ತರಗಳು ಹೇಳಿದ್ದಾರೆ. ನಿತ್ಯ ಕ್ರಮ ತಪ್ಪದೆ ಧ್ಯಾನ ಮಾಡುವುದು ಸನಾತನ ಧರ್ಮವೆಂದು ಕೆಲವರು ಹೇಳಿದಾಗ, ಕೆಲವರು ಯಜ್ಞಯಾಗಾದಿಗಳು ಮಾಡುವುದು ಸನಾತನ ಧರ್ಮ ಎಂದಿದ್ದಾರೆ. ಕೆಲವರಾದರೆ ದೇವತೆಗಳೆಲ್ಲರನ್ನು ಆರಾಧಿಸುವುದು ಸನಾತನ ಧರ್ಮ ಎಂದಾಗ, ಕೆಲವರು ದಾನಗಳು ಮಾಡುವುದು ಸನಾತನ ಧರ್ಮವೆಂದು ಹೇಳುತ್ತಿದ್ದಾರೆ. ಅವು ಯಾವು ಸನಾತನ ಧರ್ಮಗಳು ಅಲ್ಲ.

**ಪ್ರಶ್ನೆ :– (ಗೋವಿಂದಾನಂದ) ಸಾಯಿಬಾಬಾನನ್ನು ದೇವರೆಂದು ಪೂಜಿಸುತ್ತಿದ್ದಾರೆ ಅಲ್ಲವೆ! ಭಗವಂತನಿಗೆ ಆರು ಲಕ್ಷಣಗಳಿರುತ್ತವೆ. ಆ ಆರು ಲಕ್ಷಣಗಳು ಸಾಯಿ ಬಾಬಾಗೆ ಇವೆಯಾ? ಆರು ಲಕ್ಷಣಗಳು ಇಲ್ಲದವನು ಭಗವಂತನು ಹೇಗೆ ಆಗುತ್ತಾನೆ?**

**ನನ್ನ ಉತ್ತರ :–** ಗೋವಿಂದಾನಂದರು ಸಾಯಿಭಕ್ತರಾದ ರಮಣಾನಂದರನ್ನು ತನ್ನ ಪ್ರಶ್ನೆಗಳಿಂದ ಭಯಪಡಿಸಬೇಕೆಂದು ಈ ವಿಧವಾದ ಪ್ರಶ್ನೆಗಳು ಹಾಕುತ್ತಿದ್ದಾರೆ. ನಾಮ, ರೂಪ, ಕ್ರಿಯೆಗಳು ಇಲ್ಲದವನು ದೇವರೆಂದು ಮೊದಲೇ ಹೇಳಿದ್ದೇವೆ. ಆದ್ದರಿಂದ ದೇವರು ಇಂತಹವನೆಂದು ಹೇಳುವುದಕ್ಕೆ ಸಾಧ್ಯವಿಲ್ಲ. ದೇವರೇ ಭಗವಂತನಾಗಿ ಬರುವುದರಿಂದ ಭಗವಂತನನ್ನು ಸಹ ಕಂಡುಕೊಳ್ಳುವುದಕ್ಕೆ

ಸಾಧ್ಯವಿಲ್ಲದಂತಿರುತ್ತದೆ. ಭಗವಂತನಾಗಿ ಬಂದವನನ್ನೇ 'ಗುರು' ಎಂದು ಅನ್ನಬೇಕಾಗಿ ಬರುತ್ತದೆ. ದೇವರು ಮನುಷ್ಯನಾಗಿ ಬಂದು ಜ್ಞಾನವನ್ನು ಹೇಳುವುದರಿಂದ ಭಗವಂತನನ್ನೇ ಗುರು ಎನ್ನುತ್ತಿದ್ದೇವೆ. ಆದರೆ ಗುರುತಿಸಲ್ಪಡದವನು ಗುರು. ಗುರುವನ್ನು ಭೂಮಿಮೇಲೆ ಯಾರೂ ಗುರುತಿಸಲಾರರು. ಆದ್ದರಿಂದ **'ಗುಕಾರಸ್ಯ ಗುಣಾತೀತಃ, ರುಕಾರೋ ರೂಪವರ್ಜಿತಮ್'** ಎಂದು ಗುರು ಎಂಬ ಎರಡಕ್ಷರಗಳಿಗೆ ವಿವರವನ್ನು ಹೇಳಿದ್ದಾರೆ. ಇಂತಹ ರೂಪದಲ್ಲಿ ಇದ್ದಾನೆಂದು ತಿಳಿಯದವನು, ಇಂತಹ ಗುಣದಲ್ಲಿ ಇದ್ದಾನೆಂದು ಹೇಳುವುದಕ್ಕೆ ಸಾಧ್ಯವಾಗದ ಗುಣಾತೀತನು ಗುರುವೆಂದು ಪೂರ್ವದಲ್ಲಿ ದೊಡ್ಡವರು ಬರೆದಿಟ್ಟಿದ್ದಾರೆ. ಆದ್ದರಿಂದ ದೇವರು ದೇವರಾಗಿರುವಾಗಾಗಲಿ, ರೂಪದಿಂದ ಭಗವಂತನಾಗಿದ್ದಾಗಾಗಲಿ ಆತನನ್ನು ಯಾರೂ ಗುರುತಿಸಲಾರರೆಂದು ಹೇಳಬಹುದು.

ಆದರೆ ಕೆಲವರು ಅಜ್ಞಾನದಿಂದ ದೇವರೊಂದರ ಧರ್ಮ ತಿಳಿಯದವರಾಗಿ, ದೇವರೇ ಭಗವಂತನಾಗಿ ಇರುತ್ತಾನೆಂದು ತಿಳಿಯದವರಾಗಿ, ದೇವರಂತೆ ಭಗವಂತನು ಸಹ ತಿಳಿಯುದವನಾಗಿ ಇರುತ್ತಾನೆಂದು ತಿಳಿಯದವರಾಗಿ, ಭಗವಂತನಿಗೆ ಭಗವದ್ಗುಣಷಟ್ಕ ಎಂಬ ಆರು ಗುಣಗಳನ್ನು ಹೇಳಿದ್ದಾರೆ. ಗುಣಷಟ್ಕ ಎಂದರೂ ಅವು ಗುಣಗಳಲ್ಲ ಆದರೆ, ಬಾಹ್ಯ ಸಂಪದಗಳೆಂದು ಹೇಳಬಹುದು. ಭಗವಂತನಿಗೆ ಈ ಆರು ಬಾಹ್ಯ ಸಂಪದಗಳಿರುವಂತೆ ಹೇಳುತ್ತಿದ್ದಾರೆ. ಅವು ಕ್ರಮವಾಗಿ ಹೀಗೆ ಇವೆ. 1) ಐಶ್ವರ್ಯ 2) ವೀರ್ಯ 3) ಯಶಸ್ಸು(ಕೀರ್ತಿ) 4)ಶ್ರೀ 5) ಜ್ಞಾನ 6) ವೈರಾಗ್ಯ. ಈ ಆರು ಹೊಂದಿದವನು ಭಗವಂತನೆಂದು ಕುರುಡರಂತೆ ಹೇಳಿದ್ದಾರೆ. ಆದರೆ ಈ ಆರು ಭೂಮಿಮೇಲೆ ಬಹಳಜನರಿಗೆ ಇವೆ. ಹಾಗಿರುವಾಗ ಅಂತವರೆಲ್ಲರನ್ನು ಭಗವಂತರೆಂದು ಅನ್ನಬಹುದಾ? ಹಾಗೆ ಅಂದರೇ ಭಗವಂತನು ಗುರುತಿಸಲ್ಪಡುವವನೆಂದು ಹೇಳಬಹುದು. ಒಂದು ಸಮಯದಲ್ಲಿ ಭಾರತದಲ್ಲಿ ಹೇಳಲಾದ ಕರ್ಣನಿಗು ಸಹ ಈ ಆರು ಇದ್ದವು. ಅಷ್ಟುಮಾತ್ರಕ್ಕೆ ಕರ್ಣನನ್ನು

ನಾವು ಭಗವಂತನೆಂದು ಅನ್ನಲಿಲ್ಲ! ಭಗವಂತನಿಗೆ ಈ ಆರು ಇರುತ್ತವೆಯೆಂದು ಹೇಳುವುದು ಪ್ರಪಂಚ ಸಂಬಂಧವಾಗಿ ಅನ್ಯಾಯವಾಗುತ್ತದೆ. ದೈವಸಂಬಂಧವಾಗಿ ಅಧರ್ಮವಾಗುತ್ತದೆ. ಸನ್ಯಾಸಿಗಳಾಗಲಿ, ಸ್ವಾಮಿಗಳಾಗಲಿ ಈ ಮಾತು ಮಾತನಾಡುವುದು ಪೂರ್ತಿ ತಪ್ಪಾಗುತ್ತದೆ.

**ಪ್ರಶ್ನೆ :– (ಟಿವಿ9 ಅವರು) ಸಾಯಿಬಾಬಾನನ್ನು ದೇವರು ಎಂದು ಅನ್ನಬೇಕಾ? ಅನ್ನಬಾರಾದಾ? ಕೊನೆಯದಾಗಿ ಹೇಳಿರಿ.**

**ನನ್ನ ಉತ್ತರ :–** ಸಾಯಿಬಾಬ ಒಬ್ಬ ಮನುಷ್ಯ. ಆತನು ತನ್ನ ಮಹಿಮೆಗಳಿಂದ ಪ್ರಜೆಗಳಲ್ಲಿ ಬಹಳ ಹೆಸರುವಾಸಿ ಹೊಂದಿದ್ದಾನೆ. ಆದ್ದರಿಂದ ಆತನನ್ನು ನಮ್ಮ ಭಕ್ತಿ ಅನುಸರಿಸಿ ದೇವರಿಗೆ ಸಮಾನವಾಗಿ ಆರಾಧಿಸಿದರೂ ಫರವಾಗಿಲ್ಲ ಆದರೆ ಧರ್ಮಬದ್ಧವಾಗಿ ಆತನನ್ನು ದೇವರು ಎಂದು ಅನ್ನಬಾರದು. ಬ್ರಹ್ಮ ವಿದ್ಯಾ ಶಾಸ್ತ್ರವಾದ ಭಗವದ್ಗೀತೆ ಪ್ರಕಾರ ಬದುಕಿರುವ ಮನುಷ್ಯ ದೇವರನ್ನು ಗುರುತಿಸಲಾರನು. ಹಾಗೆಯೇ ಭಗವಂತನು ಗುರುತಿಸಲ್ಪಡುವುದಿಲ್ಲ. ಭಗವಂತನು ಭೂಮಿಮೇಲಕ್ಕೆ ಬಂದುಹೋದ ನಂತರ ಆತನು ಹೇಳಿದ ಧರ್ಮಗಳನ್ನನುಸರಿಸಿ ಇಂತಹವನು ಭಗವಂತನೆಂದು ಹೇಳಬಹುದು ಆದರೆ ಆತನು ಬದುಕಿರುವಾಗ ಯಾರೂ ಆತನನ್ನು ಗುರುತಿಸಲಾರರು. ವಾಸ್ತವಕ್ಕೆ ಕೃಷ್ಣನು ಬಂದು ಹೋದ ನಂತರ ನಮ್ಮಂತಹವರಿಗೆ ಆತನು ಭಗವಂತನು ಎಂದು ತಿಳಿದಿದೆ. ಆದರೆ ಉಳಿದವರು ಇಂದಿಗೂ ಆತನನ್ನು ಭಗವಂತನೆನ್ನದೇ ಜಾರನು, ಚೋರನು ಎಂದು ಅನ್ನುತ್ತಿದ್ದಾರೆ. ಸಾಯಿಬಾಬಾರವರ ವಿಷಯಕ್ಕೆ ಬಂದರೇ ಆತನು ಎಲ್ಲಿಯಾಗಲಿ, ಯಾರೊಂದಿಗಾಗಲಿ ದೈವ ಸಂಬಂಧ ಜ್ಞಾನ ಹೇಳಿರುವುದಾಗಲಿ, ದೈವಧರ್ಮಗಳನ್ನು ತಿಳಿಸಿರುವುದಾಗಲಿ ಇಲ್ಲ. ಆತನವರೆಗು ಆತನು ದೊಡ್ಡ ಸಾಧನೆಗಳು ಮಾಡಿದ್ದಾನೆ. ಎಷ್ಟೋ ವರ್ಷಗಳು ತಪಸ್ಸು ಮಾಡಿದ್ದಾನೆ, ತಪಶ್ಶಕ್ತಿಯನ್ನು ಸಂಪಾದಿಸಿಕೊಂಡಿದ್ದಾನೆ. ಅದನ್ನು ಮೋಕ್ಷಕ್ಕೆ ಉಪಯೋಗ ಪಡುವಂತೆ ಮಾಡಿಕೊಳ್ಳದೆ ಪ್ರಜೆಗಳೊಂದಿಗೆ ಮಹತ್ವಗಳಿಗೆ ವಿನಿಯೋಗಿಸಿಕೊಂಡು ಪ್ರಜೆಗಳಿಗೆ ಒಳ್ಳೆಯದು ಮಾಡಿದ್ದಾನೆ. ಅದರಿಂದ ಆತನಿಗೆ ವಿಶೇಷವಾದ ಪುಣ್ಯ

ಬಂದಿರುತ್ತದೆ. ಅಷ್ಟೇ ಹೊರತು ದೈವಿಕವಾದ ಬೋಧನೆಗಳು ಹೇಳಿದಂತೆ ಎಲ್ಲಿಯೂ ಆತನ ಜೀವನ ಚರಿತ್ರೆಯಲ್ಲಿ ಇಲ್ಲ. ಆತನಿಗೆ ತಿಳಿದಿರುವ ಪ್ರಕಾರ ಎಲ್ಲರ ದೇವರು ಒಬ್ಬನೇಯೆಂದು ಹೇಳುತ್ತಿದ್ದನು. ಆತನು ಸಹ ದೇವರನ್ನು ಕುರಿತು ತಿಳಿದುಕೊಳ್ಳುವ ಮಾರ್ಗದಲ್ಲಿ ಇದ್ದಾನೇ ಹೊರತು, ಆತನು ದೇವರು ಅಲ್ಲವೆಂದು ಹೇಳಬಹುದು. ಆತನು ದೇವರಾ! ಅಲ್ಲವಾ? ಎಂದು ಯಾರಿಗವರು ತಿಳಿದುಕೊಳ್ಳುವ ವಿಷಯವೇ ಹೊರತು, ಅದನ್ನು ಕುರಿತು ಮಾತನಾಡಿಕೊಳ್ಳುವ ವಿಷಯ ಅಲ್ಲ. ಯಾರ ನಂಬಿಕೆ ಪ್ರಕಾರ ಅವರು ನಡೆಯುತ್ತಿರುತ್ತಾರೆ. ಅವರ ನಂಬಿಕೆಗಳಿಗೆ ಅಡ್ಡ ತಗಲುವ ಪ್ರಯತ್ನ ಮಾಡಬಾರದು. ಒಂದುವೇಳೆ ಅವರನ್ನು ಒಳ್ಳೆಯುವಮಾರ್ಗದಲ್ಲಿ ನಡೆಸುವುದಕ್ಕೆ ಅಗತ್ಯವಾದ ದೈವಜ್ಞಾನವನ್ನು ಹೇಳುವುದರಿಂದ ಅವರೇ ಯಾರು ದೇವರು, ಯಾರು ದೇವರಲ್ಲವೆಂದು ತಿಳಿಯಬಲ್ಲರು. ಹಾಗಲ್ಲದೆ ಅಸೂಯೆಯಿಂದ ಇನ್ನೊಬ್ಬನು ಹೇಳುವ ಮಾತುಗಳನ್ನು ಸಹ ಕೇಳದಂತೆ ಅಡ್ಡ ಹೋಗಿ ಮಾತನಾಡುವುದು ತನ್ನ ವಾದನೆ ದೊಡ್ಡದೆನ್ನುವುದಕ್ಕೇ ಹೊರತು, ಇರುವ ಸತ್ಯವನ್ನು ಹೇಳುವುದಕ್ಕೆ ಅಲ್ಲವೆಂದು ತಿಳಿದುಹೋಗಿದೆ. ಸಾಯಿಬಾಬಾ ದೇವರಾ! ಅಲ್ಲವಾ? ಎಂಬ ಚರ್ಚಾವೇದಿಕೆಯಲ್ಲಿ ಫೋನ್‌ಗಳಲ್ಲಿ ಟಿವಿ9 ರವರ ಮೂಲಕ ಗೋವಿಂದಾ ನಂದರಿಗೆ ಎಲ್ಲರೂ ಅದ್ವೈತಕ್ಕೆ ಸಂಬಂಧಿಸಿದವರೇ ಬೆಂಬಲ ಕೊಡುವುದು, ರಮಣಾನಂದರ ಮೇಲೆ ಎದುರು ದಾಳಿ ಮಾಡುವುದು ನೋಡಿದರೆ ಒಂದು ಅದ್ವೈತರು ಹೊರತು ಇತರರು ಇರಬಾರದೆನ್ನುವುದೇ ಅವರ ಉದ್ದೇಶ. ವಿಶಿಷ್ಟಾದ್ವೈತ ಪೀಠಕ್ಕೆ ಸಂಬಂಧಿಸಿದವರೆ ಹೊರತು, ದ್ವೈತ ಪೀಠಕ್ಕೆ ಸಂಬಂಧಿಸಿ ದವರಾಗಲಿ ಯಾರೂ ಈ ಚರ್ಚೆಯಲ್ಲಿ ಯಾವಕಡೆ ಮಾತನಾಡಲಿಲ್ಲ. ಒಬ್ಬೊಬ್ಬ ಅದ್ವೈತರು ಜ್ಞಾನಿಗಳು, ಸ್ವಾಮಿಗಳು ಎಲ್ಲರೂ ಮಾತನಾಡುವುದು ನಡೆದಿದೆ. ಮಾತನಾಡುವವರು ಸಾಮರಸ್ಯವನ್ನು ಉಂಟುಮಾಡುವುದಕ್ಕೆ ಮಾತನಾಡಲಿಲ್ಲ. ಸಾಯಿಯನ್ನು ದೇವರು ಅಲ್ಲವೆಂದು ಹೇಳುವುದೇ ಅವರ ಉದ್ದೇಶವಾಗಿದೆ. ಕೊನೆಯದಾಗಿ ನಾನು ಹೇಳುವುದು ಏನೆಂದರೇ! ಏನಾದರೂ ಬ್ರಹ್ಮವಿದ್ಯಾಶಾಸ್ತ್ರದ

ಪ್ರಕಾರ ಅಂದರೇ ದೈವಜ್ಞಾನದ ಪ್ರಕಾರ ವಿವರಿಸಿ ಖಂಡಿಸಬಹುದು. ಹಾಗಲ್ಲದೆ ಶಾಸ್ತ್ರ ಒಪ್ಪಿಕೊಳ್ಳುವುದಿಲ್ಲ, ಶಾಸ್ತ್ರ ಹೀಗೆ ಹೇಳಿದೆ, ಶಾಸ್ತ್ರ ಹಾಗೆ ಹೇಳಲಿಲ್ಲ ಎಂದು ಮಾತನಾಡಬಾರದು. ಯಾವ ಶಾಸ್ತ್ರ ಹೇಳಿದೆಯೋ ಎಲ್ಲಿ ಹೇಳಿದೆಯೋ ವಿವರವಾಗಿ ಹೇಳದಂತೆ ಪ್ರತಿಯೊಂದಕ್ಕು ಶಾಸ್ತ್ರ ಎಂಬ ಮಾತನ್ನು ಅಡ್ಡ ಇಡಬಾರದು. ದೇವರಿಗೆ ಸಂಬಂಧಿಸಿರುವುದು ಬ್ರಹ್ಮವಿದ್ಯಾಶಾಸ್ತ್ರ ಒಂದೇ ಇದೆ. ಅದೇ ಭಗವದ್ಗೀತೆ. ಭಗವದ್ಗೀತೆಯಲ್ಲಿ ಭಗವಂತನು ಹೇಳಿದ ವಿಷಯವಿದ್ದರೇ ಹೇಳಬೇಕು ಆದರೆ, ಹಾಗೆ ಹೇಳದಂತೆ ಶಾಸ್ತ್ರ ಒಪ್ಪಿಕೊಳ್ಳುವುದಿಲ್ಲ ಎನ್ನುವ ವರೆಲ್ಲರೂ ಶಾಸ್ತ್ರದ ಹೆಸರು ಹೇಳಿ ಮೋಸ ಮಾಡುವವರಾಗಿ ಪರಿಗಣಿನಿ ಸಲ್ಪಡುತ್ತಾರೆ. ಭಗವದ್ಗೀತೆಯನ್ನು ಕುರಿತು ಇಲ್ಲಿಯವರೆಗು ಸರಿಯಾಗಿ ತಿಳಿಯದವರು ಸಹ ಶಾಸ್ತ್ರ ಎಂದು ಹೆಸರಿಟ್ಟು ಮಾತನಾಡುವುದು, ಜ್ಞಾನಿಗಳಾಗಿ ಚಲಾವಣೆಯಾಗುವುದು ನಡೆಯುತ್ತಿದೆ. ಈಗ ಸಮಸ್ಯೆ ಚೆರ್ಚೆಯಾಗೆ ಬಂದಿದೆಯಾದ್ದರಿಂದ ನಾವು ಭಗವದ್ಗೀತೆ ಪ್ರಕಾರ ಸಾಯಿಬಾಬಾರವರು ದೇವರು ಅಲ್ಲ, ಭಗವಂತನು ಅಲ್ಲವೆಂದು ಹೇಳುತ್ತಿದ್ದೇವೆ. ದೇವರು ದೇವಲ್ಪಡುವವ (ಹುಡುಕಲ್ಪಡುವವ)ನೇ ಹೊರತು ಸಿಗುವವನಲ್ಲ. **ದೇವರು ರೂಪ, ನಾಮ, ಕ್ರಿಯಾ ರಹಿತನು** ಆದ್ದರಿಂದ ಆತನನ್ನು ಯಾರೂ ಗುರುತಿಸಲಾರರು. ದೇವರು ಮನುಷ್ಯನಾಗಿ ಬಂದು ತನ್ನ ಜ್ಞಾನವನ್ನು ಹೇಳಬೇಕಾಗಿದೆ. ಆಗ ಭಗವಂತನಾಗಿ ಬಂದರು ಯಾರಿಗೂ ತಿಳಿಯುವುದಿಲ್ಲ. ತಿಳಿಯುವುದಕ್ಕೆ ಯಾರಿಗೂ ಸಾಧ್ಯವಾಗುವುದಿಲ್ಲ. ಆದುದರಿಂದ ಸಾಯಿಬಾಬಾ ದೇವರಾದರೂ ಆತನನ್ನು ಇಂತಹವನೆಂದು ಯಾರೂ ಹೇಳುವುದಕ್ಕೆ ಸಾಧ್ಯವಿಲ್ಲ. ಅನುಮಾನ ಇಲ್ಲದಂತೆ ಸತ್ಯವನ್ನು ಹೇಳಿದರೆ ಸಾಯಿಬಾಬಾರನ್ನು ಮಹಾತ್ಮನೆಂದು ಹೇಳಬಹುದು. ದೇವರೆಂದು ಹೇಳಬಾರದು.

**ಪ್ರಶ್ನೆ :– ಇಲ್ಲಿಯರೆಗು "ಸ್ವಾಮಿಗಳ ಲಡಾಯಿ" ಎಂಬ ಚೆರ್ಚಾವೇದಿಕೆಯಲ್ಲಿ 'ಸಾಯಿಬಾಬಾ ದೇವರಾ ಅಲ್ಲವಾ?' ಎಂಬ ವಿಷಯದ ಮೇಲೆ ಹೆಚ್ಚಾಗಿ ಗೋವಿಂದಾನಂದ ಕೇಳಿದ ಪ್ರಶ್ನೆಗಳಿಗೆ ನೀವು ಅಲ್ಲಿ ಇಲ್ಲದಿದ್ದರೂ ಮೂರನೆ**

**ವ್ಯಕ್ತಿಯಾಗಿ ಇಲ್ಲಿ ಉತ್ತರ ಕೊಟ್ಟಿದ್ದೀರಾ. ಈಗ ನಾನು ನಿಮ್ಮನ್ನು ನೇರವಾಗಿ ಒಂದು ಪ್ರಶ್ನೆಯನ್ನು ಕೇಳುತ್ತಿದ್ದೇನೆ. ಈ ವಿಷಯದಲ್ಲಿ ನೀವು ಏಕೆ ತಲೆತೂರಿಸಿ ಸಮಾಧಾನ ಗ್ರಂಥರೂಪವಾಗಿ ಹೇಳಿದ್ದೀರಾ?**

**ಉತ್ತರ :–** ಗೋವಿಂದಾನಂದರು ಹಿಂದೂಮತದಲ್ಲಿ ಸಿದ್ಧಾಂತಗಳು ಮೂರು ಇವೆ ಎಂದಾಗ, ನಾಲ್ಕನೆಯದಾದ ತ್ರೈತ ಸಿದ್ಧಾಂತವನ್ನು ಪ್ರತಿಪಾದಿಸಿದ ನಾನು ಬದುಕಿರುವಾಗ ಹಿಂದೂಮತದಲ್ಲಿ ನಾಲ್ಕನೆ ಸಿದ್ಧಾಂತ ಸಹ ಇದೆಯೆಂದು, ಅದರ ವಯಸ್ಸು ಇಲ್ಲಿಗೆ 38 ವರ್ಷಗಳೆಂದು ತಿಳಿಸುತ್ತಾ ಅದು ಎಷ್ಟು ಜ್ಞಾನ ಸಾಮರ್ಥ್ಯ ಇರುವುದೋ ಅವರು ತಿಳಿಯುವುದಕ್ಕೆ ನಾನು ಉತ್ತರ ಕೊಟ್ಟಿದ್ದೇನೆ.

**ಪ್ರಶ್ನೆ :– ಸಾಯಿಬಾಬಾರನ್ನು ಕುರಿತು ಶಿರಿಡಿಗಿಂತ ಪೂರ್ವಜೀವನವನ್ನು ಪೆನುಕೊಂಡದಲ್ಲಿ ಕಳೆದಂತೆ ನೀವು ತಿಳಿಸಿದ್ದೀರ. ಅದು ಪ್ರಜೆಗಳಿಗೆ ಹೊಸ ವಿಷಯವೇಯೆಂದು ಅಂದುಕೊಳ್ಳುತ್ತಿದ್ದೇನೆ. ಸಾಯಿಬಾಬಾರವರು ಒಂದು ದಿನ ಮದುವೆ ಗುಂಪಿನಲ್ಲಿ ಸೇರಿ ಶಿರಿಡಿಗೆ ಬಂದಂತೆ ಆಗಿನಿಂದ ಶಿರಿಡಿಯಲ್ಲಿ ನಿಂತುಹೋಗಿ ಪ್ರಜೆಗಳ ಮಧ್ಯದಲ್ಲಿದ್ದಂತೆ ಚರಿತ್ರೆ ಇದೆ. ಅದಕ್ಕಿಂತ ಸಾಯಿಬಾಬಾ ಬಗ್ಗೆ ಪ್ರಜೆಗಳಿಗೆ ತಿಳಿದಿಲ್ಲ. ಆದರೆ ನೀವು ಸಾಯಿಬಾಬಾರವರು ಶಿರಿಡಿಗಿಂತ ಮೊದಲು ಪೆನುಕೊಂಡ ಕೋಟೆ ಪ್ರಾಂತದಲ್ಲಿರುವ ಗುಹೆಯಲ್ಲಿ ಬಹಳ ವರ್ಷಗಳು ತಪಸ್ಸು ಮಾಡುತ್ತಿರುವಂತೆ ತಿಳಿಸಿದ್ದಾರೆ. ಅದೇ ವಿಧವಾಗಿ ಸಾಯಿಬಾಬಾ ಶಿರಿಡಿಯಲ್ಲಿ ಕಾಣಿಸುವುದಕ್ಕಿಂತ ಮೊದಲು, ಪೆನುಕೊಂಡ ಬಿಟ್ಟುಹೋದ ನಂತರ ಇನ್ನೂ ಎಲ್ಲಿಯಾದರೂ ಕಾಲ ಕಳೆದಿದ್ದಾನಾ? ಹಾಗೆ ಶಿರಿಡಿ ಸೇರದ ಮುನ್ನ ಎಲ್ಲಿಯಾದರೂ ಇದ್ದರೆ ಆತನು ಯಾರೊಂದಿಗೆ ಕೂಡಿರುತ್ತಿದ್ದನು? ಅಥವಾ ಪೆನುಕೊಂಡ ಪ್ರಾಂತವನ್ನು ಬಿಟ್ಟ ನಂತರ ನೇರವಾಗಿ ಶಿರಿಡಿ ಸೇರಿಹೋಗಿದ್ದಾನಾ? ನಮ್ಮಲ್ಲಿರುವ ಈ ಪ್ರಶ್ನೆಗಳಿಗೆ ನೀವು ನಿಮಗೆ ತಿಳಿದಿರುವುದನ್ನು ತಿಳಿಸಿರೆಂದು ಕೋರುತ್ತಿದ್ದೇವೆ.**

**ಉತ್ತರ :–** ನನಗೆ ತಿಳಿದಮಟ್ಟಿಗೆ ಸಾಯಿಬಾಬಾ ಪೆನುಕೊಂಡವನ್ನು ಬಿಟ್ಟ ನಂತರ ನೇರವಾಗಿ ಶಿರಿಡಿ ಗ್ರಾಮವನ್ನು ಸೇರಿದ ಮಾತು ವಾಸ್ತವವೇ ಆದರೆ,

ಆತನು ಆಗ ಮದುವೆ ಬೃಂದದಲ್ಲಿ ಸೇರಿ ಆ ಊರಿಗೆ ಹೋಗಲಿಲ್ಲ. ಆತನು ಶಿರಿಡಿ ಗ್ರಾಮವನ್ನು ಸೇರಿದ ನಂತರ ಕೆಲವು ವರ್ಷಗಳಿಗೆ ಶಿರಿಡಿ ಪ್ರಜೆಗಳಿಗೆ ಕಾಣಿಸಿದ್ದಾರೆ. ಆಗಲೇ ಆತನು ಮದುವೆ ಬೃಂದದಲ್ಲಿ ಸೇರಿ ಆ ಊರಿನೊಳಗೆ ಹೋದಂತೆ ಎಲ್ಲರಿಗೂ ತಿಳಿದಿದೆ. ಅಲ್ಲಿಯವರೆಗು ಸಾಯಿಬಾಬಾರವರು ಶಿರಿಡಿಯಲ್ಲಿಯೇ ಇರುವಂತೆ ಯಾರಿಗೂ ತಿಳಿದಿಲ್ಲ. ಆತನು ಯಾವಾಗ ಹೇಗೆ ಶಿರಿಡಿ ಸೇರಿರುವುದು ನಮಗು ಸಹ ತಿಳಿದಿಲ್ಲ. ಆದರೆ ಅಲ್ಲಿ ನಡೆದ ಕೆಲವು ಸಂಘಟನೆಗಳನ್ನನುಸರಿಸಿ ಸಾಯಿಬಾಬಾರವರು ಕೆಲವು ವರ್ಷಗಳಮುಂಚೆಯೇ ಆ ಗ್ರಾಮವನ್ನು (ಶಿರಿಡಿ) ಸೇರಿದಂತೆ ತಿಳಿಯುತ್ತಿದೆ. ಸಾಯಿಬಾಬಾ ಶಿರಿಡಿ ಗ್ರಾಮದೊಳಗೆ ಮದುವೆ ಬೃಂದದಲ್ಲಿ ಸೇರಿ ಹೋದಂತೆ ಎಲ್ಲರಿಗೂ ತಿಳಿದಿದೆ. ಆಗ ಮದುವೆಯವರೊಂದಿಗೆ ಬಂದಿದ್ದಾನೆಂದು, ಮದುವೆಯವರಿಗೆ ಪರಿಚಯಸ್ಥನೆಂದು ಎಲ್ಲರೂ ಅಂದುಕೊಂಡಿದ್ದಾರೆ. ಆದರೆ ಸಾಯಿಬಾಬಾನನ್ನು ಕುರಿತು ಮದುವೆಯವರಿಗು ಸಹ ತಿಳಿದಿಲ್ಲ. ಆತನು ಊರಿನ ಹೊರಗೆ ಮಾರ್ಗಮಧ್ಯದಲ್ಲಿ ಸೇರಿ ಅವರೊಂದಿಗೆ ಬಂದಂತೆ ಮಾತ್ರವೇ ಅವರಿಗು ಸಹ ತಿಳಿದಿದೆ. ಸಾಯಿಬಾಬಾರವರು ಶಿರಿಡಿಯನ್ನು ಸೇರಿದ ನಂತರ ಮದುವೆ ಯವರೊಂದಿಗೆ ಇದ್ದು ಮದುವೆಯವರು ಹೋದ ನಂತರ ಸಹ ಆತನು ಎಲ್ಲಿಗೂ ಹೋಗದಂತೆ ಆ ಊರಿನಲ್ಲಿಯೇ ನಿಂತುಹೋಗಿದ್ದಾನೆ. ಪೀರ್ಲಚಾವಡಿ ಯನ್ನು ತನ್ನ ನಿವಾಸವಾಗಿ ಮಾಡಿಕೊಂಡು ಇರುತ್ತಿದ್ದನು. ಪ್ರತಿ ದಿನ ಊರಿನಲ್ಲಿ ಸ್ವಲ್ಪ ಆಹಾರವನ್ನು ಕೇಳಿಕೊಂಡು ಕಾಲ ಕಳೆಯುತ್ತಿದ್ದನು. ಒಂದು ದಿನ ಆತನು ಊರಿನ ಹೊರಗೆ ಕುಳಿತುಕೊಂಡಿರುವಾಗ ಒಬ್ಬ ವ್ಯಕ್ತಿ ತನ್ನ ಕುದುರೆ ಕಾಣಿಸಲಿಲ್ಲವೆಂದು ಮೂರು ದಿನಗಳಿಂದ ಹುಡುಕುತ್ತಾ ಅಲ್ಲಿಗೆ ಬರುವುದು ನಡೆದಿದೆ. ಸಾಯಿಬಾಬಾರವರು ಕುದುರೆಗಾಗಿ ಹುಡುಕುವ ಮನುಷ್ಯನನ್ನು ನೋಡಿ ತನ್ನ ಹತ್ತಿರಕ್ಕೆ ಕರೆದು "ನೀನು ಏತಕ್ಕಾಗಿ ಹುಡುಕುತ್ತಿದ್ದೀಯಾ?" ಎಂದು ಕೇಳಿದನು. ಆಗ ಕುದುರೆಗಾಗಿ ಹುಡುಕುವವನು ತಾನು ತನ್ನ ಕುದುರೆಗಾಗಿ ಹುಡುಕುತ್ತಿದ್ದೇನೆಂದು ಹೇಳಿದ್ದಾನೆ.

ಆ ಮಾತನ್ನು ಕೇಳಿದ ಸಾಯಿಬಾಬಾರವರು ನಿನ್ನ ಕುದುರೆ ಇಂತಹ ದಿಕ್ಕಿನಲ್ಲಿ, ಇಷ್ಟು ದೂರದಲ್ಲಿ ಇದೆಯೆಂದು ಹೇಳಿದಾಗ, ಆ ಮಾತನ್ನು ಕೇಳಿದ ಆತನು ಅಲ್ಲಿಗೆ ಹೋಗಿ ನೋಡಿದಾಗ ತನ್ನ ಕುದುರೆ ಕಾಣಿಸಿತು. ಸಾಯಿಬಾಬಾ ರವರು ತನ್ನ ಕುದುರೆಯನ್ನು ಕುರಿತು ಹೇಳಿದ್ದಾನೆಂದು, ಆತನು ದೊಡ್ಡ ವ್ಯಕ್ತಿಯೆಂದು ಕುದುರೆ ಯಜಮಾನ ಶಿರಿಡಿಯಲ್ಲಿ ಹೇಳಿದಾಗ ಬಹಳಜನ ಕೇಳಿದ್ದಾರೆ. ಒಂದು ದಿನ ದೀಪಾವಳಿ ಹಬ್ಬ ಬಂದಾಗ ತನ್ನ ಚಾವಡಿಯಲ್ಲಿ ದೀಪ ಇಡುವುದಕ್ಕೆ ಸಾಯಿಬಾಬಾರವರು ಬಹಳ ಮನೆಗಳ ಹತ್ತಿರಕ್ಕೆ ಹೋಗಿ ಸ್ವಲ್ಪ ಎಣ್ಣೆಯನ್ನು ಕೇಳಿದ್ದಾನೆ. ಆದರೂ ಯಾರೂ ಎಣ್ಣೆಯನ್ನು ಕೊಡಲಿಲ್ಲ. ಎಣ್ಣೆ ಇಲ್ಲದಿರುವುದರಿಂದ ಸಾಯಿಬಾಬಾರವರು ನೀರನ್ನು ಪ್ರಣತಿಯಲ್ಲಿ ಹಾಕಿ ದೀಪಗಳನ್ನು ಬೆಳಗಿಸಿದ್ದಾನೆ. ಆ ವಿಚಿತ್ರ ದೃಶ್ಯವನ್ನು ಬಹಳಜನ ನೋಡಿ ಆತನಲ್ಲಿ ಏನೋ ಮಹತ್ವವಿದೆಯೆಂದು ಅಂದುಕೊಂಡಿದ್ದಾರೆ. ಈ ವಿಧವಾಗಿ ಕಾಲ ಕಳೆದಂತೆಲ್ಲ ಸಾಯಿಬಾಬಾರವರು ಶಿರಿಡಿಯಲ್ಲಿ ದೊಡ್ಡ ವ್ಯಕ್ತಿಯಾಗಿ ಪ್ರಚಾರವಾಗಿದ್ದಾರೆ. ಆಗಿನಕಾಲದಲ್ಲಿ ಆ ಊರಿನಲ್ಲಿ ಒಂದು ಗ್ರಾಮದೇವತೆ ಇದ್ದಳು. ಆ ದೇವತೆ ಪ್ರತಿ ಮಂಗಳವಾರ ಬೇರೆ ಮನುಷ್ಯನೊಳಗೆ ಬಂದು ಅಲ್ಲಿಗೆ ಬಂದಿರುವ ಮನುಷ್ಯರೊಂದಿಗೆ ಮಾತನಾಡುತ್ತಿದ್ದಳು. ಅಲ್ಲಿಗೆ ಬಂದಿರುವ ಮನುಷ್ಯರು ಅನೇಕ ವಿಧಗಳ ಸಮಸ್ಯೆಗಳನ್ನು ಕೇಳುತ್ತಿದ್ದರು. ಅವರ ಸಮಸ್ಯೆಗಳಿಗೆಲ್ಲ ಆ ದೇವತೆಯೇ ಪರಿಷ್ಕಾರ ಮಾರ್ಗವನ್ನು ಹೇಳುತ್ತಿದ್ದಳು. ಬಹಳ ಜನ ಮನುಷ್ಯರು ಪ್ರತಿ ಮಂಗಳವಾರ ಅಲ್ಲಿಗೆ ಬಂದು ಅವರ ಕಷ್ಟಗಳಿಗೆ ಪರಿಷ್ಕಾರವನ್ನು ಕೇಳುತ್ತಿದ್ದರು. ಆ ದೇವತೆ ಮೇಲೆ ಎಲ್ಲರಿಗೂ ಪೂರ್ತಿ ನಂಬಿಕೆ ಇರುತ್ತಿತ್ತು. ಪ್ರತಿ ಮಂಗಳವಾರ ಸಾಯಂಕಾಲ ಆರು ಗಂಟೆಗಳಿಂದ ಏಳು ಗಂಟೆಗಳವರೆಗು ಪ್ರಜೆಗಳೊಂದಿಗೆ ಮಾತನಾಡುತ್ತಿದ್ದಳು. ಹಾಗೆ ಸುಮಾರು ಐದು ವರ್ಷಗಳಿಂದ ನಡೆಯುತ್ತಿತ್ತು. ಆಗ ಸಾಯಿಬಾಬಾರವರು ಶಿರಿಡಿ ಗ್ರಾಮದಲ್ಲಿ ಪ್ರವೇಶಿಸಿ ಸುಮಾರು ಆರು ತಿಂಗಳು ಕಳೆದುಹೋಗಿದೆ. ಆರು ತಿಂಗಳ ಕಾಲದಲ್ಲಿ ಸಾಯಿಬಾಬಾ ಆ ಗ್ರಾಮದಲ್ಲಿ ಎಷ್ಟೋ ಮಹತ್ವಗಳನ್ನು ತೋರಿಸುವುದರಿಂದ ಆತನ ಗ್ರಾಮ

ಪ್ರಜೆಗಳೆಲ್ಲರಲ್ಲಿ ಹೆಸರುಗಳಿಸಿದ್ದಾನೆ. ಸಾಯಿಬಾಬಾನನ್ನು ಕುರಿತು ಆ ಗ್ರಾಮಸ್ಥರೆಲ್ಲರಿಗೂ ತಿಳಿದುಕೊಳ್ಳಬೇಕೆಂದು ಇರುವುದರಿಂದ, ಒಂದು ದಿನ ಎಲ್ಲರೂ ಸೇರಿ ಸಾಯಿಬಾಬಾ ವಿಷಯವನ್ನು ಕುರಿತು ಶರೀರದೊಳಗೆ ಬರುವ ಗ್ರಾಮ ದೇವತೆಯನ್ನು ಕೇಳಿ ತಿಳಿದುಕೊಳ್ಳಬೇಕೆಂದುಕೊಂಡಿದ್ದಾರೆ.

ಮಂಗಳವಾರ ಬಂದಿದೆ. ದೇವತೆ ಮೈಮೇಲೆ ಬಂದ ತಕ್ಷಣ ಅಲ್ಲಿನ ಪ್ರಜೆಗಳು ಸಾಯಿಬಾಬಾನನ್ನು ಕುರಿತು ಆತನು ಎಲ್ಲಿಂದ ಬಂದಿದ್ದಾನೆ? ಆತನು ಯಾರು? ಎಂದು ಪ್ರಶ್ನಿಸಿ ಕೇಳಿದ್ದಾರೆ. ಐದು ವರ್ಷಗಳಿಂದ ಬಂದು ಸುಮಾರು ಗಂಟೆ ಸಮಯ ಮಾತನಾಡುವ ದೇವತೆ ಸಾಯಿಬಾಬಾನನ್ನು ಕುರಿತು ಕೇಳಿದ ತಕ್ಷಣ ದೇವತೆ ಒಂದು ನಿಮಿಷ ಸಹ ಇರದಂತೆ ಹೋಗುವುದು ಎಲ್ಲರಿಗೂ ಆಶ್ಚರ್ಯವಾಗಿದೆ. ನಂತರ ವಾರ ಕಳೆದುಹೋಗಿ ಮಂಗಳವಾರ ಬಂದಿದೆ. ಆ ಸಾಯಂಕಾಲ ದೇವತೆ ಸಹ ಮೈಮೇಲೆ ಬಂದಿದೆ. ಆ ದೇವತೆ ತನ್ನ ಭಕ್ತಳಾಗಿರುವ ಆಕೆಯ ಶರೀರದ ಮೇಲೆ ಬರುತ್ತಿದ್ದಳು. ದೇವತೆ ಬಂದ ತಕ್ಷಣ ಅಲ್ಲಿರುವ ವರೆಲ್ಲರೂ ಸಾಯಿಬಾಬಾ ವಿಷಯವನ್ನು ಪುನಃ ಕೇಳಿದ್ದಾರೆ. ಆಗ ಆ ದೇವತೆ ಅಲ್ಲಿರುವ ಪ್ರಜೆಗಳನ್ನು ತನ್ನ ಹಿಂದೆ ಕರೆದುಕೊಂಡು ಶಿರಿಡಿ ಗ್ರಾಮ ಶಿವಾರು ಪ್ರಾಂತಕ್ಕೆ ಬಂದಿದ್ದಾಳೆ. ಅಲ್ಲಿ ಬಯಲು ಪ್ರಾಂತ ಹುಲ್ಲಿನಮೈದಾನವಾಗಿ ಇತ್ತು. ಆ ಮೈದಾನದಲ್ಲಿ ದೇವತೆ ಒಂದುಕಡೆ ನಿಂತು ತೋರುಬೆರಳಿನಿಂದ ಭೂಮಿಕಡೆ ತೋರಿಸಿ ತಕ್ಷಣ ಮೈಮೇಲಿಂದ ತೇಲಿಹೋಗುವುದು ನಡೆದಿದೆ. ಭೂಮಿಕಡೆ ಬೆರಳನ್ನು ತೋರಿಸಿದ ದೇವತೆ ಎರಡನೆ ಮಾತು ಏನು ಮಾತನಾಡದಂತೆ ಶರೀರವನ್ನು ಬಿಟ್ಟು ಹೋಗಿದ್ದಾಳೆ. ಎರಡು ಬಾರಿ ಆ ದೇವತೆ ಹಾಗೆ ಮಾಡುವುದು ಎಲ್ಲರಿಗೂ ಆಶ್ಚರ್ಯವಾಗಿದೆ.

ದೇವತೆ ಬೆರಳಿನಿಂದ ತೋರಿಸಿದ ಭೂಮಿಯನ್ನು ಅಗೆದು ನೋಡಬೇಕೆಂದುಕೊಂಡಿದ್ದಾರೆ. ಮರುದಿನ ಗ್ರಾಮ ಪ್ರಜೆಗಳೆಲ್ಲರೂ ಸೇರಿ ಆ ಸ್ಥಳವನ್ನು ಅಗೆಯುವುದು ನಡೆದಿದೆ. ಭೂಮಿಯನ್ನು ಎರಡು ಅಡಿಗಳ ಆಳವನ್ನು ಅಗೆಯುತ್ತಲೇ ಜೋಡಿಸಿಟ್ಟಿರುವ ಇಟ್ಟಿಗೆಗಳು ಕಾಣಿಸಿವೆ. ಕಾಣಿಸಿದ ಇಟ್ಟಿಗೆಗಳನ್ನು

ಪಕ್ಕಕ್ಕೆ ತೆಗೆದು ನೋಡಿದಾಗ ಭೂಮಿಯೊಳಗೆ ಒಂದು ಸುರಂಗ ಮಾರ್ಗ ಕಾಣಿಸಿದೆ. ಕೆಳಗೆ ಇಟ್ಟಿಗೆಗಳಿಂದ ಜೋಡಿಸಿರುವ ಮೆಟ್ಟಿಲು ಕಾಣಿಸಿವೆ. ಮೆಟ್ಟಿಲುಗಳೊಂದಿಗೆ ಒಳಗೆ ಇಳಿದು ನೋಡಿದಾಗ, ಭೂಗರ್ಭದಲ್ಲಿ 8 ಅಡಿಗಳ ಆಳದಲ್ಲಿ ಒಂದು ದೊಡ್ಡ ರೂಮಿನಂತೆ ಬಯಲು ಕಾಣಿಸಿದೆ. ಹದಿನೈದು ಅಡಿಗಳ ಉದ್ದ, ಹದಿನೈದು ಅಡಿಗಳ ಅಗಲವಿರುವ ಕೋಣೆಯಂತೆ ಇರುವುದು, ಆ ಕೋಣೆ ಸುಮಾರು ಹತ್ತು ಅಡಿಗಳ ಎತ್ತರ ಹೊಂದಿರುವುದಾಗಿ ಕಾಣಿಸಿದೆ. ಆ ಕೋಣೆ ಮಧ್ಯದಲ್ಲಿ ಮೂರು ಅಡಿಗಳ ಎತ್ತರ ಮೂರು ಅಡಿಗಳ ಉದ್ದ, ಅಗಲವಿರುವ ಒಂದು ಕಟ್ಟೆ ಕಾಣಿಸಿತು, ಆ ಕಟ್ಟೆಯ ಮೇಲೆ ಹಸುವಿನ ತಲೆಯ ಆಕೃತಿ ಇರುವ ಗೊಂಬೆ ಒಂದಿರುವಾಗ, ಅದರಮುಂದೆ ಐದು ದೀಪಗಳಿರುವಂತೆ ಕಾಣಿಸಿದೆ, ಆ ದೀಪಗಳು ಯಾವಾಗ ಹಚ್ಚಿರುವವೊ ಯಾರಿಗೂ ಅರ್ಥವಾಗಲಿಲ್ಲ. ಅದನ್ನೆಲ್ಲವೂ ಆಶ್ಚರ್ಯವಾಗಿ ನೋಡಿದ ಜನರು ಅಲ್ಲಿಂದ ಬಂದಿದ್ದಾರೆ. ಸಾಯಿಬಾಬಾನನ್ನು ಕುರಿತು ದೇವತೆ ಏನು ಮಾತನಾಡದಂತೆ ಆ ಸ್ಥಳವನ್ನು ನೋಡುವುದರಿಂದ, ಆ ಸ್ಥಳದ ವಿಷಯ ಸಾಯಿಬಾಬಾನನ್ನೇ ಕೇಳಿ ತಿಳಿದುಕೊಳ್ಳಬೇಕೆಂದುಕೊಂಡಿದ್ದಾರೆ.

ಆ ಊರಿನ ದೊಡ್ಡ ಮನುಷ್ಯರೆಲ್ಲರೂ ಸೇರಿ ಸಾಯಿಬಾಬಾ ಹತ್ತಿರಕ್ಕೆ ಹೋಗಿ, ಊರಿನ ಹೊರಗೆ ಬಯಲು ಪ್ರಾಂತದಲ್ಲಿ ದೇವತೆ ತೋರಿಸಿದ ಸ್ಥಳವನ್ನು ಅಗೆದಾಗ, ಸುರಂಗ ಭೂಗರ್ಭದಲ್ಲಿನ ಕೋಣೆ ಕಾಣಿಸಿದೆಯೆಂದು ಹೇಳಿದ್ದಾರೆ. ಅದರಲ್ಲಿ ಗೋಮುಖ ಆಕೃತಿ ಮತ್ತು ದೀಪಗಳಿರುವಂತೆ ಸಾಯಿಬಾಬಾಗೆ ತಿಳಿಸಿ ಅದರ ಬಗ್ಗೆ ಕೇಳಿದ್ದಾರೆ. ಆಗ ಗ್ರಾಮ ಹಿರಿಯರ ಮಾತುಗಳನ್ನು ಕೇಳಿದ ಸಾಯಿಬಾಬಾರವರು ಎದ್ದು ತರಾತುರಿಯಲ್ಲಿ ಊರಿನ ಹೊರಗಿರುವ ಭೂಗರ್ಭದಲ್ಲಿನ ಕೋಣೆಯ ಹತ್ತಿರಕ್ಕೆ ಸೇರಿಕೊಂಡು, ಅಲ್ಲಿ ಸುರಂಗವನ್ನು ಮೊದಲು ಅ ರಂಧ್ರವನ್ನು ಮುಚ್ಚಿಹಾಕಿರೆಂದು ಹೇಳಿದ್ದಾನೆ. ಅಲ್ಲಿ ಅಗೆದಿರುವ ಸುರಂಗಮಾರ್ಗವನ್ನು ನೋಡಿದ ಸಾಯಿಬಾಬಾರವರ ಮುಖದಲ್ಲಿ ಸ್ವಲ್ಪ ಕೋಪ ಸಹ ಕಾಣಿಸಿದೆಯಂತೆ. ಅದನ್ನು ಕೊಡಲೇ

ಮುಚ್ಚಿಹಾಕಿರೆಂದು ಗದರಿಸಿ ಹೇಳಿದಾಗ, ಅಲ್ಲಿ ಸೇರಿದವರೆಲ್ಲರೂ ಶ್ರಮಪಟ್ಟು ಆ ರಂಧ್ರವನ್ನು ಮುಚ್ಚಿಹಾಕಿದ್ದಾರೆ. ಆಗ ಸಾಯಿಬಾಬಾರವರು ಆ ಊರಿನ ಪ್ರಜೆಗಳೊಂದಿಗೆ ಎಂದಿಗೂ ಈ ರಂಧ್ರವನ್ನು ತೆಗೆಯಬೇಡಿರೆಂದು ಹೇಳಿದ್ದಾನಂತೆ. ಆದರೆ ಆ ಗುಹೆಯನ್ನು ಕುರಿತು ಇತ್ತ ದೇವತೆಯಾಗಲಿ, ಅತ್ತ ಸಾಯಿಬಾಬಾ ಆಗಲಿ ಏನೂ ಹೇಳಲಿಲ್ಲ. ಆಗಿನಿಂದ ಆ ಸುರಂಗವನ್ನು ಯಾರೂ ಅಗೆಯಬೇಕೆಂದುಕೊಳ್ಳಲಿಲ್ಲ. ಸುರಂಗಮಾರ್ಗ ಭೂಮಿಯಲ್ಲಿರುವಂತೆ ಬೆರಳು ತೋರಿಸಿದ ದೇವತೆ ಪುನಃ ಎಂದಿಗೂ ಮೈಮೇಲೆ ಬರಲಿಲ್ಲವಂತೆ. ಸಾಯಿಬಾಬಾ ರವರು ಬೇಡವೆಂದು ಹೇಳಿದ ಕೆಲಸವನ್ನು ಯಾರೂ ಮಾಡಲಿಲ್ಲ. ದೇವತೆ ನಂತರ ಮೈಮೇಲೆ ಬರದಿರುವುದರಿಂದ ಸುರಂಗವೊಂದರ ರಹಸ್ಯ ಯಾರಿಗೂ ತಿಳಿಯದಂತೆಹೋಗಿದೆ.

ನಾನು ಇಲ್ಲಿಯವರೆಗೂ ಶಿರಿಡಿಗೆ ಹೋಗಿ ಏನು ನೋಡಲಿಲ್ಲ. ಆದರೆ ಈ ವಿಷಯಗಳೆಲ್ಲವೂ ಸಾಯಿಬಾಬಾರವರು ಬದುಕಿರುವಾಗ ಅವರೊಂದಿಗೆ ಶಿರಿಡಿಯಲ್ಲಿ ನಿವಾಸಿಸಿದ ವ್ಯಕ್ತಿ 'ಶಿರಿಡಿಯಲ್ಲಿ ತನ್ನ ಅನುಭವ' ಎಂಬ ಚಿಕ್ಕ ಗ್ರಂಥವನ್ನು ಬರೆದಿರುವುದರಿಂದ ಈ ವಿಷಯಗಳು ನನಗೆ ತಿಳಿದಿವೆ. ಒಂದು ಸಮಯದಲ್ಲಿ ಅನಂತಪುರಂ ಜಿಲ್ಲೆ ಪಾಮಿಡಿ ನಿವಾಸಿಯಾದ ಒಬ್ಬ ವ್ಯಕ್ತಿ ಆತನ ಹೆಸರು ಸರಿಯಾಗಿ ಜ್ಞಾಪಕವಿಲ್ಲ. ಬಹುಶಃ ವೆಂಕಟಸ್ವಾಮಿ ಎಂದು ಅಂದುಕೊಳ್ಳುತ್ತೇನೆ. ಪಾಮಿಡಿ ನದಿಯ ಮಧ್ಯ ಭಾಗದಲ್ಲಿ ಚಿಕ್ಕ ಗುಡಿಗಳು ಇವೆ. ಆ ಗುಡಿಗಳನ್ನು ನಿರ್ಮಿಸಿದಂತೆ ಆ ಗ್ರಂಥದಲ್ಲಿ ಬರೆದಿದ್ದಾರೆ. ಗುಡಿಗಳನ್ನು ನಿರ್ಮಿಸಿದ್ದಾನೆಂದರೇ ಚೆನ್ನಾಗಿ ಸಾಮರ್ಥ್ಯ ಇರುವ ಮನುಷ್ಯನೇ ಎಂದು ಅರ್ಥವಾಗುತ್ತದೆ. ಆ ವ್ಯಕ್ತಿ ಸಾಯಿಬಾಬಾರವರು ಶಿರಿಡಿಗೆ ಬಂದಾಗ ಅಲ್ಲಿಯೇ ಎಂದರೇ ಶಿರಿಡಿಯಲ್ಲಿಯೇ ನಿವಾಸಿಸುತ್ತಿದ್ದನಂತೆ. ಆಗಲೇ ಆತನು ಪಾಮಿಡಿ ಗ್ರಾಮವನ್ನು ಬಿಟ್ಟು ಶಿರಿಡಿ ಸೇರಿದಂತೆ ಬರೆದಿದ್ದಾರೆ. ಸಾಯಿಬಾಬಾರವರು ಶಿರಿಡಿಯಲ್ಲಿರುವಾಗ ಆತನೊಂದಿಗೆ ಶಿರಿಡಿಯಲ್ಲಿರುವ ವೆಂಕಟಸ್ವಾಮಿ ಎಂಬ ವ್ಯಕ್ತಿ ಬರೆದ ತನ್ನ ಅನುಭವಗಳನ್ನು ನೋಡಿದ (ಓದಿದ) ನಂತರ

ಸಾಯಿಬಾಬಾರವರ ವಿಷಯ, ಭೂಮಿಯಲ್ಲಿರುವ ಗುಹೆ ವಿಷಯ, ಗ್ರಾಮದೇವತೆ ವಿಷಯ ತಿಳಿದಿದೆ. ಈ ವಿಷಯಗಳು ಇತರರಿಗೆ ತಿಳಿದಿವೆಯೋ, ತಿಳಿದಿಲ್ಲವೋ ನನಗೆ ಮಾತ್ರ ತಿಳಿದಿಲ್ಲ. ವೆಂಕಟಸ್ವಾಮಿಯವರು ಸಹ ಆ ದಿನಗಳಲ್ಲಿ ಸಾಯಿಗೆ ಅತ್ಯಂತ ಸಮೀಪ ಭಕ್ತನಾಗಿ ಇದ್ದನೆಂದು ಬರೆದಿದ್ದಾನೆ.

ಸಾಯಿಬಾಬಾರವರು ಶಿರಿಡಿಗೆ ಹೋಗದಮುನ್ನ ಪೆನುಕೊಂಡದಲ್ಲಿ ನಿವಾಸಿಸಿದ್ದಾನೆಂದು ಬಾಬಾ ಫಕುರುದ್ದೀನ್ ತಂಗಿ ಅಂಬೋಜಮ್ಮ ಮುಖಾಂತರ ತಿಳಿದಾಗ, ಸಾಯಿಬಾಬಾರವರು ಶಿರಿಡಿಯಲ್ಲಿ ಕಾಣಿಸದಮುನ್ನ ಪೆನುಕೊಂಡ ಸಮೀಪದಲ್ಲಿನ ಗುಹೆಯಲ್ಲಿ ತಪಸ್ಸು ಮಾಡಿದಂತೆ, ಆತನು ಶಿರಿಡಿಯಲ್ಲಿ ಕಾಣಿಸದಮುನ್ನ ಪೆನುಕೊಂಡದಿಂದ ಹೋದ ನಂತರ ಶಿರಿಡಿ ಗ್ರಾಮದ ಹೊರಗೆ ಭೂಮಿಯಲ್ಲಿರುವ ಗುಹೆಯಲ್ಲಿ ಬಹಳ ವರ್ಷಗಳು ತಪಸ್ಸು ಮಾಡಿದಂತೆ ತಿಳಿಯುತ್ತಿದೆ. ಎಷ್ಟೋ ಕಾಲ ತಪಸ್ಸುಮಾಡಿದ ಆತನು ತನ್ನ ತಪಸ್ಸನ್ನು ನಿಲ್ಲಿಸಿ ಊರ ಹೊರಗಿನಿಂದಲೇ ಮದುವೆ ಬೃಂದದಲ್ಲಿ ಸೇರಿ ಬಂದಿದ್ದಾನೆ. ಅಷ್ಟೇ ಹೊರತು ಆತನು ಬೇರೇ ಊರಿನಿಂದ ಶಿರಿಡಿಯೊಳಗೆ ಬರಲಿಲ್ಲ. ಇಲ್ಲಿ ಮುಖ್ಯವಾಗಿ ತಿಳಿಯಬೇಕಾದ ವಿಷಯವೊಂದು ಇದೆ. ಅದೇನೆಂದರೇ! ಪೆನುಕೊಂಡದಲ್ಲಿ ತಪಸ್ಸು ಮಾಡಿದಾಗ ವಯಸ್ಸು ಸುಮಾರು ಅರವತ್ತು ವರ್ಷಗಳಿಗೆ ಮೇಲೆ ಇದ್ದವು. ಶಿರಿಡಿಗೆ ಹೋದ ನಂತರ ಭೂಗರ್ಭ ಗುಹೆಯಲ್ಲಿ ಅದೇ ಶರೀರದಿಂದ ತಪಸ್ಸುಮಾಡಿ ಪೂರ್ತಿ ವೃದ್ಧಾಪ್ಯದಲ್ಲಿ ಹೊರಗೆ ಬಂದಿದ್ದಾನೆ. ಹೊರಗೆ ಬಂದ ನಂತರ ಹಳೆ ಶರೀರವನ್ನು ಬಿಟ್ಟು ಸೂಕ್ಷ್ಮ ಶರೀರದಿಂದ ಕೆಲವು ದಿನಗಳಿದ್ದು ಒಂದು ದಿನ ಶಿರಿಡಿಗೆ ಭಿಕ್ಷೆ ಬೇಡುವುದಕ್ಕೆ ಬರುತ್ತಿರುವ ಫಕೀರ್ ಒಳಗೆ ಸಾಯಿಬಾಬಾ ಸೂಕ್ಷ್ಮಶರೀರ ಸೇರಿಹೋಗಿದೆ. ಭಿಕ್ಷೆ ಬೇಡುವ ಫಕೀರ್‌ನ ವಯಸ್ಸು ಆಗ ಸುಮಾರು ಮೂವತ್ತು ವರ್ಷಗಳು ಇರಬಹುದು.

30 ವರ್ಷಗಳಾಗಲಿ ಅಥವಾ 25 ವರ್ಷಗಳಾಗಲಿ ವಯಸ್ಸಿರುವ ಪಕೀರ್‌ನ ಶರೀರದಲ್ಲಿ ಸೇರಿದ ಸಾಯಿಬಾಬಾ ಪಕೀರಾಗಿಯೇ ಶಿರಿಡಿಯಲ್ಲಿ ಇರುತ್ತಿದ್ದನು. ಆತನು ಶರೀರವನ್ನು ಬದಲಿಸಿಕೊಂಡಿರುವುದು ಯಾರಿಗೂ

ತಿಳಿದಿಲ್ಲ. ಸಾಯಿಬಾಬಾಗೆ ಪೆನುಕೊಂಡದಲ್ಲಿರುವ ಶರೀರ ಶಿರಿಡಿಯಲ್ಲಿ ಇಲ್ಲ. ಹಾಗೆಯೇ ಶಿರಿಡಿಯಲ್ಲಿರುವ ಶರೀರ ಪುಟ್ಟಪರ್ತಿಯಲ್ಲಿ ಇಲ್ಲ. ಶಿರಿಡಿಯನ್ನು ಬಿಟ್ಟು ಬಂದನಂತರ ಸತ್ಯನಾರಾಯಣ ರಾಜು ಶರೀರದಲ್ಲಿ ಸೇರಿ ಜೀವನವನ್ನು ಸಾಗಿಸಿದ್ದಾನೆ. ಈಗಲೂ ಸಹ ಆತನು ಮರಣವನ್ನು ಹೊಂದದೆ ಸೂಕ್ಷ್ಮ ಶರೀರದೊಂದಿಗೆ ಹೊರಗೆ ಬಂದು ಯಾವುದೊ ಒಂದು ಶರೀರವನ್ನು ಧರಿಸಿ ಜೀವನವನ್ನು ಸಾಗಿಸುತ್ತಾನೆ ಎಂದು ಅಂದುಕೊಳ್ಳುತ್ತಿದ್ದೇನೆ. ನಮಗೆ ತಿಳಿದು ಪೆನುಕೊಂಡದಲ್ಲಿ ಒಂದು ಶರೀರ. ಶಿರಿಡಿಯಲ್ಲಿ ಮತ್ತೊಂದು ಶರೀರದಲ್ಲಿರುವ ಸಾಯಿಬಾಬಾ ಪುಟ್ಟಪರ್ತಿಯಲ್ಲಿ ಇನ್ನೊಂದು ಶರೀರವನ್ನು ಬಳಸಿಕೊಂಡಿದ್ದಾನೆ. ಈ ವಿಧವಾಗಿ ಪೆನುಕೊಂಡ, ಶಿರಿಡಿ, ಪುಟ್ಟಪರ್ತಿ ಎಂಬ ಮೂರು ಊರುಗಳಲ್ಲಿ ಮೂರು ಶರೀರಗಳನ್ನು ಬದಲಾಯಿಸಿ ನಿವಾಸಿಸಿದಂತೆ ಅರ್ಥವಾಗುತ್ತಿದೆ. ಈ ವಿಧವಾಗಿ ಆತನು ಎಷ್ಟೋ ತಪಸ್ಸು ಮಾಡಿ ಸಂಪಾದಿಸಿ ಕೊಂಡ ಶಕ್ತಿಯನ್ನು ಮಹತ್ವಗಳಿಗೆ ಉಪಯೋಗಿಸಿಕೊಂಡಿದ್ದಾನೆಂದು ಅರ್ಥ ವಾಗುತ್ತಿದೆ. ಆತನ ಬದುಕು ಆತನು ಬದುಕುವಾಗ ಆತನನ್ನು ಕುರಿತು ಏನೂ ತಿಳಿಯದೆ, ಆತನು ದೇವರೆಂದು ಕೆಲವರು, ದೇವರು ಅಲ್ಲವೆಂದು ಕೆಲವರು ವಾದಿಸುತ್ತಿದ್ದಾರೆ. ಸಾಯಿಬಾಬಾರವರ ನಿಜ ಜೀವನ ಮೂರು ತಲಾಂತರಗಳು ತಿಳಿದ ನಾವು ಸಾಯಿಬಾಬಾ ಒಬ್ಬ ಮಹಾತ್ಮನೇ ಹೊರತು ದೇವರು ಮಾತ್ರ ಅಲ್ಲವೆಂದು ಹೇಳುತ್ತಿದ್ದೇವೆ.

ಇಂತಿ

**ಪ್ರಬೋಧಾನಂದ ಯೋಗೀಶ್ವರ್**

**ಒಂದು ವಿಷಯವನ್ನು ಹೇಳುವುದಕ್ಕೆ ಶಾಸ್ತ್ರ ಎಷ್ಟು ಅವಶ್ಯವೋ, ಹಾಗೆಯೇ ಒಂದು ವಿಷಯವನ್ನು ಖಂಡಿಸುವುದಕ್ಕೂ ಶಾಸ್ತ್ರ ಅಷ್ಟೇ ಅವಶ್ಯವಾಗುತ್ತದೆ.**

**ಅಸತ್ಯವನ್ನು ಸಾವಿರ ಜನ ಹೇಳಿದರೂ, ಅದು ಸತ್ಯವಲ್ಲ,**
**ಸತ್ಯವನ್ನು ಸಾವಿರ ಜನ ಅಲ್ಲಗಳೆದರೂ, ಅದು ಅಸತ್ಯವಲ್ಲ.**

# ಸಾಯಿಬಾಬಾ
# ದೇವರಾ! ಅಲ್ಲವಾ!




Author :

**The Only GURU of Three Religions**

The Spiritual Emperor, Thraitha Theorem Originator

**Sri Acharya Prabodhananda Yogeeshwarulu**


www.thraithashakam.org